

# ವಿವೇಕಪ್ರಭ

ಮಾರ್ಚ್-2017 ಸಂಪುಟ 18 ಸಂಚಿಕೆ 03



## ವಿಶೇಷ ಲೇಖನ



## ಧಾರಾವಾಹಿ









ವ್ಯವಸ್ಥಾಪಕ ಸಂಪಾದಕರು
*ಸ್ವಾಮಿ ಆತ್ಮಜ್ಞಾನಂದ*
ಸಂಪಾದಕರು
*ಸ್ವಾಮಿ ಜ್ಞಾನಯೋಗಾನಂದ*
ನೆರವು:
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*
ಅಕ್ಷರ ಜೋಡಣೆ
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*
ಮುದ್ರಣ
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

ಮುಖಪುಟ:
ಹೊಸತನದ ವಿಸ್ಮಯ

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505

ಚಂದಾ ವಿವರ
ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



ಪ್ರಾರ್ಥನೆ

# ಶ್ರೀ ಹನುಮತ್ಪಂಚರತ್ನಂ

ವೀತಾಖಿಲವಿಷಯೇಚ್ಛಂ ಜಾತಾ-
ನಂದಾಶ್ರುಪುಲಕಮತ್ಯಚ್ಛಮ್ ।
ಸೀತಾಪತಿದೂತಾದ್ಯಂ ವಾತಾ-
ತ್ಮಜಮದ್ಯ ಭಾವಯೇ ಹೃದ್ಯಮ್ ॥ ೧ ॥

ವಿಷಯಸುಖಗಳ ಬಯಕೆಯನ್ನೆಲ್ಲ ತ್ಯಜಿಸಿದ, ಸಂತಸದ ಕಣ್ಣೀರಿನಿಂದ ಪುಳಕಿತನಾದ, ಜಾನಕೀರಮಣನ ಮೊಟ್ಟಮೊದಲ ದೂತನಾದ, ಸುಂದರ ವಾಯುಪುತ್ರ ಆಂಜನೇಯನನ್ನು ಇಂದು ಭಾವಿಸುತ್ತೇನೆ.

ತರುಣಾರುಣಮುಖಕಮಲಂ
ಕರುಣಾರಸಪೂರಪೂರಿತಾಪಾಂಗಂ ।
ಸಂಜೀವನಮಾಶಾಸೇ ಮಂಜುಲ
ಮಹಿಮಾನಮಂಜನಾಭಾಗ್ಯಂ ॥ ೨ ॥

ಬಾಲಾರುಣನಂತೆ ಕಾಂತಿಯುಕ್ತವಾದ ಮುಖಕಮಲವುಳ್ಳ , ದಯಾರಸ ಪ್ರವಾಹದಿಂದ ತುಂಬಿದ ಕಡೆಗಣ್ಣುಳ್ಳ , ಜೀವದಾತನಾದ, ಮನೋಜ್ಞ ಮಹಿಮೆಯುಳ್ಳ , ಅಂಜನಾದೇವಿಯ ಪಾಲಿಗೆ ಭಾಗ್ಯವಾದ ಹನುಮಂತನನ್ನು ಸ್ತುತಿಸುತ್ತೇನೆ.

ಶಂಬರವೈರಿಶರಾತಿಗಮಂಬುಜ-
ದಲವಿಪುಲಲೋಚನೋದಾರಂ ।
ಕಂಬುಗಲಮನಿಲದಿಶಷ್ಟಂ
ಬಿಂಬಜ್ವಲಿತೋಷ್ಠಮೇಕಮವಲಂಬೇ ॥ ೩ ॥

ಮನ್ಮಥನ ಬಾಣವನ್ನು ದೂರೀಕರಿಸಿದ ತಾವರೆಯ ದಳದಂತೆ ವಿಶಾಲವಾದ ಕಣ್ಣಿನಿಂದ ಉದಾರನಾದ, ಶಂಖದಂತೆ ಕೊರಳುಳ್ಳ, ವಾಯುದೇವನಿಗೆ ಭಾಗ್ಯವಾದ, ತೊಂಡೆಹಣ್ಣಿನಂತೆ ಕಾಂತಿಯುಕ್ತವಾದ ತುಟಿಯುಳ್ಳ ಆಂಜನೇಯನೊಬ್ಬನನ್ನೇ ನಾನು ಆಶ್ರಯಿಸುತ್ತೇನೆ.

ದೂರೀಕೃತಸೀತಾರ್ತಿಃ ಪ್ರಕಟೀ-
ಕೃತರಾಮವೈಭವಸ್ಫೂರ್ತಿಃ ।
ದಾರಿತದಶಮುಖಕೀರ್ತಿಃ ಪುರತೋ
ಮಮ ಭಾತು ಹನುಮತೋ ಮೂರ್ತಿಃ ॥೪॥

ಜಾನಕೀದೇವಿಯ ದುಃಖವನ್ನು ದೂರ ಮಾಡಿದ, ಶ್ರೀರಾಮಚಂದ್ರನ ವೈಭವದ ಸ್ಫೂರ್ತಿಯನ್ನು ಪ್ರಕಟಪಡಿಸಿದ, ದಶಮುಖ ರಾವಣನ ಕೀರ್ತಿಯನ್ನು ನಾಶಗೊಳಿಸಿದ ಹನುಮಂತನ ಮೂರ್ತಿಯು ಸದಾ ನನ್ನೆದುರಿಗೆ ಶೋಭಿಸಲಿ.

ವಾನರನಿಕರಾಧ್ಯಕ್ಷಂ ದಾನವ-
ಕುಲಕುಮುದರವಿಕರಸದೃಶಂ ।
ದೀನಜನಾವನದೀಕ್ಷಂ ಪವನ-
ತಪಃಪಾಕಪುಂಜಮದ್ರಾಕ್ಷಂ ॥೫॥

ವಾನರ ಸೈನ್ಯಕ್ಕೆ ನಾಯಕನಾದ, ದೈತ್ಯಕುಲವೆಂಬ ನೈದಿಲೆಗಳನ್ನು ಸೂರ್ಯನ ಕಿರಣವಾಗಿ ನಾಶಗೊಳಿಸಿದ, ದೀನಜನರನ್ನು ರಕ್ಷಿಸುವುದರಲ್ಲಿ ದೀಕ್ಷಾಬದ್ಧನಾದ,(ಆಸಕ್ತನಾದ) ವಾಯುದೇವನ ತಪಸ್ಸಿನ ಸಿದ್ಧಿಗಳ ಸಮೂಹವಾದ, ಹನುಮಂತನನ್ನು ನಾನು ದರ್ಶನ ಮಾಡಿದೆನು.

ಏತತ್ಪವನಸುತಸ್ಯ ಸ್ತೋತ್ರಂ ಯಃ ಪಠತಿ ಪಂಚರತ್ನಾಖ್ಯಂ ।
ಚಿರಮಿಹ ನಿಖಿಲಾನ್ಭೋಗಾನ್ಭುಂಕ್ತ್ವಾ ಶ್ರೀರಾಮಭಕ್ತಿಭಾಗ್ಭವತಿ ॥೬॥

೬. ಈ ಹನುಮತ್ಪಂಚರತ್ನಸ್ತೋತ್ರವನ್ನು ಯಾವನು ಪಠಿಸುವನೋ ಅವನು ಬಹುಕಾಲ ಈ ಲೋಕದ ಭೋಗಭಾಗ್ಯಗಳನ್ನು ಅನುಭವಿಸಿ ಶ್ರೀರಾಮಚಂದ್ರನ ಭಕ್ತಿಗೆ ಭಾಜನನಾಗುತ್ತಾನೆ.

-ಶ್ರೀ ಶಂಕರಾಚಾರ್ಯ

ಸೂಕ್ತಿಪ್ರಭ

## ಕನ್ನಡ ಸೂಕ್ತಿಗಳು

ಕಲ್ಲಾಗಿ ಇರಬೇಕು ಕಠಿಣ ಭವ ತೊರೆಯೊಳಗೆ
ಬಿಲ್ಲಾಗಿ ಇರಬೇಕು ಬಲ್ಲವರೊಳು ।
ಮೆಲ್ಲನೇ ಮಾಧವನ ಮನದಿ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಂಧುಜನರೊಳಗೆ ॥

-ಪುರಂದರದಾಸರು

ಸತ್ಯವೇ ನಮ್ಮ ತಾಯಿ ತಂದೆ
ಸತ್ಯವೇ ನಮ್ಮ ಬಂಧುಬಳಗ
ಸತ್ಯವಾಕ್ಯಕೆ ತಪ್ಪಿ ನಡೆದರೆ
ಮೆಚ್ಚನಾ ಜಗದೀಶನು ॥

-ಪುಣ್ಯಕೋಟಿಯ ಕಥೆ

ರಸವೆ ಜನನ, ವಿರಸ ಮರಣ
ಸಮರಸವೇ ಜೀವನ ॥ -ದ.ರಾ.ಬೇಂದ್ರೆ

ದಯವಿಲ್ಲದ ಧರ್ಮವದೇವುದಯ್ಯಾ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ ॥ -ಬಸವಣ್ಣ

ಅನ್ನವನು ಇಕ್ಕುವುದು । ನನ್ನಿಯನೆ ನುಡಿಯುವುದು
ತನ್ನಂತೆ ಪರರ ಬಗೆದೊಡೆ ಕೈಲಾಸ ।
ಬಿನ್ನಾಣವಕ್ಕು ಸರ್ವಜ್ಞ ॥ -ಸರ್ವಜ್ಞ

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ)

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು
ಶಿವಮೊಗ್ಗ ಜಿಲ್ಲೆ
ಫೋನ್: 08183–296516

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಪ್ರವಾಸಿ ಮಂದಿರ ಹತ್ತಿರ,
ಹೊಸನಗರ–577418
ಶಿವಮೊಗ್ಗ ಜಿಲ್ಲೆ
ಫೋನ್: 08185–221915



ಮಾನ್ಯ ವಿದ್ಯಾಕಾಂಕ್ಷಿಗಳೇ.

"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸ ಖಂಡಗಳು ಮತ್ತು ಉಕ್ಕಿನಂತಹ ನರಗಳು. ನಾವು ಬಹಳ ಕಾಲ ಅತ್ತಿದ್ದೇವೆ. ಇನ್ನು ಮುಂದೆ ಅಳುವುದು ಬೇಡ. ನಿಮ್ಮ ಕಾಲ ಮೇಲೆ ನೀವು ನಿಂತುಕೊಂಡು ಮನುಷ್ಯರಾಗಿ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣದ ಧರ್ಮ. ನಮಗಿಂದು ಬೇಕಾಗಿರುವುದು ಮಾನವ ನಿರ್ಮಾಣ ಸಿದ್ಧಾಂತಗಳು. ಸಮಗ್ರ ಮಾನವ– ನಿರ್ಮಾಣದ ಶಿಕ್ಷಣವೇ ನಮಗಿಂದು ಬೇಕಾಗಿರುವುದು" ಎಂದು ಸ್ವಾಮಿ ವಿವೇಕಾನಂದರು ಬಹಳ ಹಿಂದೆಯೇ ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಚ್ಚಾರಿತ್ರ್ಯವುಳ್ಳ ಧೀಮಂತ, ವಿನಯವಂತ, ಸತ್ಪುರುಷರ ನಿರ್ಮಾಣವು ಸುಸಂಸ್ಕೃತ ಹಾಗೂ ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣದ ಮೂಲಕವೇ ಆಗಬೇಕಾಗಿದೆ.

ರಾಜ್ಯದಾದ್ಯಂತ ಬಂದಿರುವ ನೂರಾರು ಮಕ್ಕಳು ಇಲ್ಲಿ ಕಲಿಯುತ್ತಿದ್ದು, ಸಂಸ್ಥೆಯು ಅವರನ್ನು ಅಕ್ಕರೆಯಿಂದ, ಮಮತೆಯಿಂದ, ಪೋಷಿಸಿ ಹೃದಯವರಳಿಸಿ, ಅವರ ಅಂತರಂಗದಲ್ಲಿ ಹುದುಗಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ, ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನಾಗಿ ರೂಪಿಸುತ್ತಿದೆ.

ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ವಿದ್ಯಾಸಂಸ್ಥೆಗಳು ಮಕ್ಕಳ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸುತ್ತಿವೆ. ದೇಶದಾದ್ಯಂತ ಖ್ಯಾತಿ ಹೊತ್ತ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ, ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:–** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :–** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:–** ಎಲ್.ಕೆ.ಜಿ ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:–**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ.

5) **ವಸತಿ ಶಾಲೆಗೆ ಪ್ರವೇಶ:–**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ
* ಪ್ರವೇಶ ಪರೀಕ್ಷೆ, ಸಂದರ್ಶನವಿರುತ್ತದೆ
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿರುತ್ತದೆ
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಗಾಗಿ ಶಾಲೆಯನ್ನು ಸಂಪರ್ಕಿಸಿ
* ಹೆಚ್ಚಿನ ವಿವರ ಶಾಲೆಯಲ್ಲಿ ಲಭ್ಯ







## ರಾಮಕೃಷ್ಣ ಮಿಷನ್, ಪೊಂಡಾ, ಗೋವಾ


*(Reverside Centre)*
**Parsol, P.O.Khadepar Branch Office, Inside From Khursakade Bus Stop,**
**After Chowgule Maruti Service, PONDA, GOA - 403406**
**Mob: 09414042638** Website: www.rkmgoa.org


# ಒಂದು ಮನವಿ

ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತದಾದ್ಯಂತ ಸಂಚರಿಸುತ್ತಿದ್ದಾಗ ಗೋವಾದ ಮಡಗಾಂವ್‌ಗೆ 1892ರ ಅಕ್ಟೋಬರ್ 27ರಂದು ಬಂದರು. ಅಲ್ಲಿನ ಪ್ರಸಿದ್ಧ ವಿದ್ವಾಂಸರು ಹಾಗೂ ಭಕ್ತರಾಗಿದ್ದ ಶ್ರೀ ಸುಬ್ರಾಯ ನಾಯಕ್ ಅವರು ಸ್ವಾಮೀಜಿಯವರನ್ನು ಆದರದಿಂದ ಬರಮಾಡಿಕೊಂಡು, ತಮ್ಮ ನಿವಾಸದಲ್ಲೇ ಅವರ ವಸತಿಗೆ ವ್ಯವಸ್ಥೆ ಮಾಡಿಕೊಟ್ಟರು. ಸ್ವಾಮೀಜಿ ಗೋವೆಯ ಶಾಂತದುರ್ಗಾ ದೇವಾಲಯ, ಮಹಾಲಸಾ ದೇವಾಲಯ ಹಾಗೂ ಮಂಗೇಶ ದೇವಾಲಯಗಳನ್ನು ಸಂದರ್ಶಿಸಿದರು. ಅವರು ಪಣಜಿ ನಗರವನ್ನು ಕೂಡ ಸಂದರ್ಶಿಸಿದರು. ಸ್ವಾಮೀಜಿ ಗೋವೆಯ ಕ್ರೈಸ್ತ ದೇವಾಲಯಗಳನ್ನು ಸಂದರ್ಶಿಸಿ, ಅಲ್ಲಿ ಹಳೆಯ ಲ್ಯಾಟಿನ್ ಧರ್ಮಗ್ರಂಥಗಳ ಅಧ್ಯಯನ ಮಾಡಿದರು.

ಭಕ್ತರುಗಳಿಂದ ನಿರ್ವಹಿಸಲ್ಪಡುವ '**ರಾಮಕೃಷ್ಣ-ವಿವೇಕಾನಂದ ಸೇವಾ ಸಮಿತಿ**'ಯು 1996ರಲ್ಲಿ ಮಡಗಾಂವ್‌ನಲ್ಲಿ ಆರಂಭವಾಯಿತು. ಮುಂದೆ ಈ ಸಮಿತಿಯ ಚಟುವಟಿಕೆ ವ್ಯಾಪಕಗೊಂಡು, 2006ರಲ್ಲಿ ಆರು ಎಕರೆ ಜಮೀನನ್ನು ಪಡೆಯಿತು. ಈ ಸಮಿತಿಯು ದಿವ್ಯತ್ರಯರ ಜೀವನ, ಸಂದೇಶಗಳ ಪ್ರಚಾರವಲ್ಲದೆ ಯುವಕರಿಗಾಗಿ ವ್ಯಕ್ತಿತ್ವ ವಿಕಸನ, ವಿವಿಧ ಸ್ಪರ್ಧೆಗಳು ಹಾಗೂ ಅನೇಕ ಶಿಬಿರಗಳನ್ನು ನಡೆಸುತ್ತ ಬಂದಿದೆ.

ಸಮಿತಿಯ ಕೋರಿಕೆಯ ಮೇರೆಗೆ ರಾಮಕೃಷ್ಣ ಮಹಾಸಂಘವು ಗೋವೆಯನ್ನು ರಾಮಕೃಷ್ಣ ಮಿಷನ್ನಿನ ಅಧಿಕೃತ ಶಾಖಾಕೇಂದ್ರವನ್ನಾಗಿ ಮಾಡಿಕೊಳ್ಳಲು ಒಪ್ಪಿಕೊಂಡಿದೆ. ಪ್ರಸ್ತುತ ಹಸ್ತಾಂತರ ಕಾರ್ಯದ ಅಧಿಕೃತ ಕೆಲಸಗಳು ತ್ವರಿತವಾಗಿ ನಡೆಯುತ್ತಿವೆ.



PROJECT -1 VIVEKANANDA CULTURAL CENTRE

PROSPECTIVE VIEW OF THE UPCOMING BUILDING

SAMITI'S SIX ACRES OF LAND

### ರಾಮಕೃಷ್ಣ ಮಿಷನ್, ಪೊಂಡಾ, ಗೋವಾ ಇದರ ಹೊಸ ಯೋಜನೆಗಳು :

**1.** ಭಕ್ತ ದಂಪತಿಗಳೊಬ್ಬರ ಉದಾರ ನೆರವಿನಿಂದ ರಾಮಕೃಷ್ಣ ಮಿಷನ್ನಿಗೆ 471 ಮೀ.ಚದರಳತೆಯ ಜಮೀನು ಪ್ರಾಪ್ತವಾಗಿದ್ದು, ಇದು **ಪೊಂಡಾ** ಪಟ್ಟಣದ ಪ್ರಧಾನ ಭಾಗದಲ್ಲಿರುವ ದಾದಾ ವೈದ್ಯ ಚೌಕದಲ್ಲಿದೆ. ಇಲ್ಲಿ ಮಿಷನ್ 'ವಿವೇಕಾನಂದ ಸಾಂಸ್ಕೃತಿಕ ಕೇಂದ್ರ'ವನ್ನು ಸ್ಥಾಪಿಸಲು ಮೂರು ಅಂತಸ್ತಿನ ಕಟ್ಟಡವೊಂದನ್ನು ನಿರ್ಮಿಸಲು ಉದ್ದೇಶಿಸಿದೆ. ಇದರಲ್ಲಿ ಸಾಂಸ್ಕೃತಿಕ ಭವನ, ಪುಸ್ತಕ ಮಾರಾಟ ಮಳಿಗೆ, ಯೋಗ ತರಬೇತಿ ಕೊಠಡಿ, ಕಂಪ್ಯೂಟರ್ ಕಲಿಕಾ ಕೇಂದ್ರ ಇತ್ಯಾದಿಗಳು ನಡೆಯಲಿವೆ. ಇದು ಗೋವಾ ರಾಮಕೃಷ್ಣ ಮಿಷನ್ನಿನ ನಗರ ಕೇಂದ್ರವಾಗಿದೆ.

**2.ರಾಮಕೃಷ್ಣ-ವಿವೇಕಾನಂದ ಸಮಿತಿಗೆ ಸಮೀಪವಿರುವ ಜಮೀನಿನಲ್ಲಿ:** ಸಮಿತಿಗೆ ಸಮೀಪದಲ್ಲಿ ಭಕ್ತರೊಬ್ಬರು ಮಿಷನ್ನಿಗೆ 371ಮೀ.ಚದರಳತೆಯ ಭೂಮಿಯನ್ನು ನೀಡಿದ್ದು, ಇಲ್ಲಿ ಮಿಷನ್ 10 ಕೋಣೆಗಳಿಂದ ಕೂಡಿದ ಕಚೇರಿಯ ಕಟ್ಟಡವನ್ನು ನಿರ್ಮಿಸಲು ಉದ್ದೇಶಿಸಿದೆ. ಮುಂದೆ ಈ ಭೂಮಿಯು ಸಮಿತಿಯಿಂದ ಹಸ್ತಾಂತರಿಸಲಾಗುವ ಭೂಮಿಯೊಂದಿಗೆ ವಿಲೀನಗೊಂಡು, ಒಂದೇ ವಠಾರದಲ್ಲಿ ನೆಲೆಗೊಳ್ಳುವುದು. ಇಲ್ಲಿ ಒಂದು ಸಣ್ಣ ಪ್ರಾರ್ಥನಾ ಮಂದಿರ, ಪುಸ್ತಕ ಮಾರಾಟ ಮಳಿಗೆ ಹಾಗೂ ಕಚೇರಿ ಇವನ್ನು ನಿರ್ಮಿಸಲಾಗುವುದು.

**3. ಸಮಿತಿ ಹಸ್ತಾಂತರಿಸುವ ಆರು ಎಕರೆ ಜಮೀನಿನಲ್ಲಿ** ಹಂತಹಂತವಾಗಿ ಈ ಸೇವಾಕಾರ್ಯಗಳನ್ನು ಕೈಗೊಳ್ಳಲು ಮಿಷನ್ ಯೋಜನೆ ಹಾಕಿಕೊಂಡಿದೆ: * ಶ್ರೀರಾಮಕೃಷ್ಣರ ವಿಶ್ವಭಾವೈಕ್ಯ ಮಂದಿರ * ಚಿಕಿತ್ಸಾಲಯ * ಬಾಲಕ ಸಂಘ * ಆಧ್ಯಾತ್ಮಿಕ ಶಿಬಿರ * ಬಾಲಕರ ವಿದ್ಯಾರ್ಥಿ ನಿಲಯ * ಸಾಧು ನಿವಾಸ * ಸಾಂಸ್ಕೃತಿಕ ಭವನ

ಈ ಯೋಜನೆಗಳಿಗೆ ತಗಲುವ ವೆಚ್ಚ: ಯೋಜನೆ 1– 200 ಲಕ್ಷ ರೂ.; ಯೋಜನೆ 2– 66ಲಕ್ಷ ; ಯೋಜನೆ 3– ಪ್ರಗತಿಯಲ್ಲಿದೆ.

ಸ್ನೇಹಿತರೇ, ಈ ಎಲ್ಲ ಯೋಜನೆಗಳ ಒಟ್ಟು ಮೊತ್ತವನ್ನು ಸದ್ಯದಲ್ಲೇ ನಾವು ಸಂಪೂರ್ಣವಾಗಿ ಅಂದಾಜಿಸಲಿದ್ದೇವೆ. ಒಟ್ಟಿನಲ್ಲಿ, ಅನೇಕ ಕೋಟಿ ರೂ. ಮೊತ್ತದ ಈ ಯೋಜನೆಗಳಿಗೆ ಎಲ್ಲ ಭಕ್ತರ, ಹಿತೈಷಿಗಳ ಹಾಗೂ ಉದಾರ ದಾನಿಗಳ ನೆರವು ಅತ್ಯಂತ ಅಗತ್ಯವಾಗಿದೆ. ಈ ಮಹಾಕಾರ್ಯದಲ್ಲಿ ನೆರವಾಗುವ ಎಲ್ಲರಿಗೂ ದಿವ್ಯತ್ರಯರ ಕೃಪಾಶೀರ್ವಾದಗಳು ಲಭಿಸುವುದೆಂಬ ನಂಬಿಕೆ ನಮ್ಮದು. ತಾವು ನೀಡಬಯಸುವ ದೇಣಿಗೆಯ ಮೊತ್ತವನ್ನು ನಗದು/ಚೆಕ್/ಡಿ.ಡಿ.ಮೂಲಕ '**RAMAKRISHNA MISSION, PONDA**' ಹೆಸರಿನಲ್ಲಿ ತೆಗೆದು, ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಂತಿ:

**Ramakrishna Mission, Ponda, Goa (Riverside Centre),** Parsol, P.O.: Khandepar Branch Office, Inside from Khursakade Bus Stop, After Chowgule Maruti Service, **PONDA, GOA - 403 406.** Mob: 09414042638

**ನೇರ ಬ್ಯಾಂಕ್ ಖಾತೆಗೆ ಹಣ ವರ್ಗಾಯಿಸಬಹುದು. ಅದಕ್ಕೆ ಅಗತ್ಯವಾದ ವಿವರಗಳು ಹೀಗಿವೆ:**

Account Name: **Ramakrishna Mission, Ponda**
Type of A/c: **Saving Account**

**All donations are exempt under section 80G of Income Tax Act.**
**Our Pan No: AAAAR1077P**

**Bank of India,** Panduranga Plaza, Tisk, Usgao, Ponda, Goa-403406.
Ph: 0832-2345651/52
**IFSC/RTGS Code: BKID0001037**
**MICR Code: 403013038**
**A/c No: 103710110005784**

**Punjab National Bank,** Ponda, Goa - 403401,
Ph: 0832-2317171
**IFSC /RTGS Code: PUNB0684700**
**MICR Code: 403024006**
**A/c No: 6847000100021760**

ಸಂಪಾದಕೀಯ

# ನವೋಲ್ಲಾಸದ ಕ್ಷಿತಿಜದತ್ತ..

### ಹೊಸತನದ ಗಾಳಿ

ಮುಂಜಾವದ ನಸುಕಿನಲ್ಲಿ ಬೆಳಕಿನ ರೇಖೆಗಳು ಬಿದ್ದೊಡನೆ ಹಕ್ಕಿಗಳ ಕೂಗು, ಎಚ್ಚೆತ್ತ ಜಗತ್ತಿನ ಲವಲವಿಕೆ ಎಲ್ಲೆಡೆ ವ್ಯಾಪಿಸುವಂತೆ, ಬಾನಂಗಳದಲ್ಲಿ ಬೆಳಗಿನ ಓಕುಳಿ ಚೆಲ್ಲಾಡಿದಂತೆ ಜೀವನದ ವಿವಿಧ ಹೆಜ್ಜೆಗಳಲ್ಲಿ ಹೊಸಹುಟ್ಟಿನ ಹುರುಪು ಗರಿಗೆದರಿ ನರ್ತಿಸುವುದುಂಟು. ಏಕತಾನತೆಯ ಜಾಡ್ಯ ಎಂಥ ಕ್ರಿಯಾಶೀಲ ಮನಸ್ಸನ್ನೂ ಮುದುಡಿ ಮರಗಟ್ಟುವಂತೆ ಮಾಡಿ, ಎಲ್ಲಿ ಬದಲಾವಣೆ, ಎಲ್ಲಿ ಮರುಹುಟ್ಟು ನೀಡುವ ಒಂದು ಕ್ಷಣ ಬರುವುದು ಎಂದು ಕಾಯುತ್ತಿರುತ್ತದೆ. ಆದರೆ ಈ ಬಗೆಯ ನಿಶ್ಚೇಷ್ಟಿತ ಕಾಲಯಾಪನೆ ಬಹುಕಾಲ ಉಳಿಯದು; ಎಲ್ಲಿಂದಲೋ ಹೊಸ ಗಾಳಿ ಬೀಸಿಯೇ ತೀರುವುದು—ಈ ಸತ್ಯವನ್ನು ನಾವು ಮರೆಯುತ್ತೇವೆ. ಜಡತೆಯಲ್ಲಿ ಮುದುಡಿಹೋಗುವ ಒಂದೊಂದು ಕ್ಷಣವೂ ಅತಿದೀರ್ಘವೆನಿಸುತ್ತದೆ; ಅಸಹನೀಯ ಯಾತನೆಯಾಗಿ ಮಾರ್ಪಡುತ್ತದೆ.

ನವೋಲ್ಲಾಸದ ಮಾರ್ಪಾಡು ಇದ್ದಕ್ಕಿದ್ದಂತೆ ಬರುವುದಲ್ಲ; ಅದರ ಸೂಚನೆ ಸಿಕ್ಕೇ ಸಿಗುತ್ತದೆ. ಆದರೆ ಅದನ್ನು ಗಮನಿಸುವ ಸ್ಥಿತಿಯಲ್ಲಿ ನಾವಿರುವುದಿಲ್ಲ—ಅಷ್ಟೆ. ಅನಿರೀಕ್ಷಿತವಾಗಿ ಬಂದೊದಗುವ ಬದಲಾವಣೆಗಲ್ಲವೇ ಅನುಪಮ ಸೌಂದರ್ಯ, ಅದಲ್ಲವೇ ನಿಜವಾದ ಹೊಸತನ? ಹಿಂದಿನ ದುಗುಡವೆಲ್ಲವೂ ಮರೆತುಹೋಗುವಂತೆ ಹೊಸತನ್ನು ಅಹ್ವಾನಿಸಿ, ಎಳೆಬಿಸಿಲಲ್ಲಿ ಮೈ ಬೆಚ್ಚಗಾಗಿಸುತ್ತೇವೆ. ಇದು ಜೀವನದ ಸಹಜಕ್ರಿಯೆ; ಜಗದ್ವ್ಯಾಪಾರದಲ್ಲಿ ಅನವರತವೂ ನಡೆಯುತ್ತಿರುವ, ಚಕ್ರದಂತೆ ಆವರ್ತಿಸುತ್ತಿರುವ ಕಾಲಪರಿವರ್ತನೆ.

### ನಿಸರ್ಗ-ಋತುಮಾನ

ಪ್ರತಿಯೊಂದು ದೇಶದಲ್ಲೂ ಜನಾಂಗದಲ್ಲೂ, ವಿಭಿನ್ನ ಸಾಂಸ್ಕೃತಿಕ ಜನಜೀವಗಳಲ್ಲೂ ಹೊಸತನ್ನು ಆಹ್ವಾನಿಸುವ, ಅದರ ಹರುಷದಲ್ಲಿ ಪಾಲ್ಗೊಂಡು, ನಕ್ಕು ನಲಿದು ಸಂತಸಪಡುವ ಹಬ್ಬಗಳಿವೆ. ಹೊಸ ವರ್ಷವೆಂದು, ಹೊಸ ಬೆಳೆಯನ್ನು ಮನೆಗೆ ತರುವ ಸುಗ್ಗಿಯ ಹಬ್ಬವೆಂದು, ಜಗತ್ತಿನ ಶಕ್ತಿಕೇಂದ್ರವೂ ಆಧ್ಯಾತ್ಮಿಕ ಚೈತನ್ಯವೂ ಆದ ಸೂರ್ಯನ ದಾರಿ ಬದಲಾಗುವ ಸಂಕ್ರಮಣವೆಂದು ಈ ಹಬ್ಬವನ್ನು ಆಚರಿಸುತ್ತೇವೆ. ಮಾನವನ ಜೀವನದೊಂದಿಗೆ ಹಾಸುಹೊಕ್ಕಾಗಿರುವ ಕೃಷಿಗೂ ನೈಸರ್ಗಿಕ ಬದಲಾವಣೆಗಳಿಗೂ ಅತಿ ಹತ್ತಿರದ ಸಂಬಂಧವಿದೆ. ಇದಕ್ಕೆ ಅನುಸಾರವಾಗಿ ವಿವಿಧ ಋತುಗಳಲ್ಲಿ ಉಂಟಾಗುವ ಪರಿವರ್ತನೆಗಳಿಗೆ ತಕ್ಕಂತೆ ಹೊಸತನ್ನು ಕಂಡುಕೊಳ್ಳುವ, ಹೊಸ ಬದುಕಿನ ಭವಿಷ್ಯವನ್ನು ಹಾರೈಸುವ ಹಬ್ಬಗಳೂ ರೂಪುಗೊಂಡಿವೆ. ಜಗತ್ತಿನಲ್ಲಿ ಸಾಮಾನ್ಯವಾಗಿ ಫಲವತ್ತತೆ, ಸೌಂದರ್ಯ, ಸುಖಸಮೃದ್ಧಿಗಳನ್ನು ಸಂಕೇತಿಸುವ ವಸಂತಋತುವಿನಲ್ಲೇ ಹೊಸವರ್ಷವನ್ನು ಸ್ವಾಗತಿಸುವ ಜಾಯಮಾನ ಕಂಡುಬರುತ್ತದೆ. ಜನವರಿಯಲ್ಲಿ ಹೊಸವರ್ಷವನ್ನು ಆಚರಿಸುವ ಕ್ರೈಸ್ತ ಸಂಪ್ರದಾಯಕ್ಕೆ ಧಾರ್ಮಿಕ ಹಿನ್ನೆಲೆ ಇರಬಹುದು;  ಅದು ನೈಸರ್ಗಿಕ ಪರಿವರ್ತನೆಯ ಕಾರಣದಿಂದ ಮೂಡಿಬಂದುದಲ್ಲ. ನಮ್ಮಲ್ಲಿ ಯುಗಾದಿ, ಸಂಕ್ರಮಣ, ವಸಂತೋತ್ಸವ, ಸುಗ್ಗಿ ಮುಂತಾದ ಋತುಮಾನವನ್ನಾಧರಿಸಿದ ಹಬ್ಬಗಳೆಲ್ಲವೂ ಈ ಸಂದರ್ಭದಲ್ಲೇ ಹೊಸ ವರ್ಷವನ್ನು, ಸುಖದಾಯಕ ಭವಿಷ್ಯವನ್ನು ಸ್ವಾಗತಿಸುವುದು ಅತ್ಯಂತ ಸಹಜವಾಗಿದೆ.

ಚೈತನ್ಯವನ್ನೇ ಮುದುಡಿಸುವ ಚಳಿಗಾಲ, ಜೀವಜಲವನ್ನೇ ಇಂಗಿಸುವ ಬೇಸಿಗೆ ಇವನ್ನು ಸಾಮಾನ್ಯವಾಗಿ ಯಾವ ಸಂಸ್ಕೃತಿಯೂ ಹಬ್ಬಹರಿದಿನಗಳ ಕಾಲವೆಂದು ಕರೆಯುವುದಿಲ್ಲ. ಹಲವು ಮಂದಿ ಮಹಾತ್ಮರ, ಸಾಧುಸಂತರ ಅಥವಾ ದೇವತೆಗಳ ಜನ್ಮಜಯಂತಿ ಈ ಸಂದರ್ಭದಲ್ಲಿ ಬಂದರೆ ಮಾತ್ರ ಅದಕ್ಕೆ ಅಪವಾದ. ಅನೇಕ ಪ್ರದೇಶಗಳಲ್ಲಿ ಬಿಸಿಲಿನ ಬೇಗೆಗೆ ಬೆಂದ ಬದುಕಿನಲ್ಲಿ, ಮಳೆಗಾಲದ ಆಗಮನ ಆನಂದದಾಯಕ ಕ್ಷಣವಾಗುತ್ತದೆ. ಊರಿಗೆ ಊರೇ ಮಳೆನೀರಿನಲ್ಲಿ ಮಿಂದು ಆನಂದ, ಉತ್ಸವಗಳನ್ನು ಆಚರಿಸುತ್ತದೆ. ಅದಕ್ಕಿಂತಲೂ, ಚಳಿಗಾಲದ ಜಾಡ್ಯ ಹಿಂದಕ್ಕೆ ಜಾರಿ, ಹೊಸ ಚಿಗುರು, ಹೂಹಣ್ಣುಗಳನ್ನು ಬಿಡುವ 'ಮಧುಮಾಸ'ವೇ ಲೋಕದಲ್ಲಿ ಸಕಲರಿಗೂ ಪ್ರಿಯ. ಇವೆಲ್ಲ ವಾರ್ಷಿಕ ಋತುಮಾನದ ಬದಲಾವಣೆಗಳಾದರೆ, ತಿಂಗಳಿಗೊಮ್ಮೆ ಬಂದುಹೋಗುವ ಹುಣ್ಣಿಮೆ-ಅಮಾವಾಸ್ಯೆಗಳು, ಪ್ರತಿದಿನ ಮೂಡಿಮುಳುಗುವ ಸೂರ್ಯನ ಗಮನ, ರಾತ್ರಿ-ಹಗಲಿನ ಮುಗಿಯದ ಕಣ್ಣುಮುಚ್ಚಾಲೆಯಾಟ—ಹೀಗೆ ಸರ್ವತ್ರ ಹೊಸತನದ ಲಯ

ಬದ್ಧತೆಯಲ್ಲೇ ನಾವು ಜೀವನದ ಜೋಕಾಲಿಯನ್ನು ತೂಗಾಡಿಸುತ್ತೇವೆ; ಆದರೆ ಇವೆಲ್ಲದರ ಚೆಲುವು, ನಲಿವುಗಳನ್ನು ಮರೆಸುವ ಇನ್ನೊಂದು ರೋಗ ನಮ್ಮನ್ನು ಅಂಟಿಕೊಂಡಿದೆ—ಅದೇ ಮಾನಸಿಕ ಜಾಡ್ಯ.

### ಮಾನಸಿಕ ಭಾವಗಳಲ್ಲಿ

ಹೊರಗಿನ ಪ್ರಪಂಚದಲ್ಲಿ ಹೇಗೋ ಹಾಗೆ, ನಮ್ಮ ಮಾನಸಿಕ ಪ್ರಪಂಚದಲ್ಲೂ ಹೊಸತನ, ಹೊಸ ಪ್ರೇರಣೆ, ನವೋಲ್ಲಾಸ ಆಗಾಗ ಮೂಡಿ ಮರೆಯಾಗುವುದು ಸಹಜ. ಹೊಸತನ್ನು ಕಾಣುವ, ಹೊಸತನದ ಬೆರಗಿನಲ್ಲಿ ಮೈಮರೆಯುವ, ಅದೇ ಭಾವ ಹಳೆಯದಾದಾಗ ಅದೂ ಸಪ್ಪೆಯೆನಿಸಿ, ಬೇರೆ ಹೊಸದರತ್ತ ಹೊರಳುವುದು ಮನಸ್ಸಿನ ಒಂದು ಗುಣ. ಕೆಲವು ಸಂದರ್ಭಗಳಲ್ಲಿ ಇದನ್ನೇ ಚಾಪಲ್ಯವೆಂದು ದೂಷಿಸುವುದೂ ಇದೆ. ಆದರೆ ಸದಾ ಹೊಸತನ್ನರಸುವ, ಹೊಸ ಸೃಷ್ಟಿಯನ್ನು ಮಾಡುವ ಪ್ರವೃತ್ತಿ ಮನಸ್ಸಿನ ಕ್ರಿಯಾಶೀಲತೆಯಲ್ಲವೆ? ಮಾನವನ ಮನಸ್ಸು ಒಂದೇ ಗತಿಯಲ್ಲಿ, ಒಂದೇ ಸ್ಥಿತಿಯಲ್ಲಿ ಇರುತ್ತಿದ್ದರೆ ಅವನ ವಿಕಾಸ, ಬೆಳವಣಿಗೆ ಎಲ್ಲಿ ಸಾಧ್ಯವಾಗುತ್ತಿತ್ತು? ಕ್ಷಣಕ್ಷಣಕ್ಕೂ ಹೊಸತನ್ನು ಕಾಣುವ ಹಾಗೂ ಸೃಷ್ಟಿಸುವ ಪ್ರತಿಭೆ ಅವನಿಗಿರುವುದರಿಂದಲೇ ಅವನೊಬ್ಬ ಅಸಾಧಾರಣ ಜೀವಿಯಾದ. ಇಂತಹ ಅಸಾಮಾನ್ಯ ಶಕ್ತಿಯಿಂದಲೇ ಅವನ ಬದುಕು ವಿಸ್ತಾರಗೊಂಡಿತು, ಸಮೃದ್ಧಗೊಂಡಿತು. ಆದರೆ ಈ ಭಾವಗಳಿಗೆ ಪ್ರತಿಯಾಗಿ ಮಾನಸಿಕ ಖಿನ್ನತೆ, ಜಾಡ್ಯ, ಗೊಂದಲ, ಮಂಕು ಕವಿದಂತಾಗಿ ಏನೂ ಮಾಡಲಾಗದ ಒಂದು ಬಗೆಯ ದೌರ್ಬಲ್ಯ – ಇವುಗಳೂ ನಮ್ಮ ಮನಸ್ಸನ್ನೂ ಆವರಿಸುವುದಿದೆ; ಹತ್ತು ಹಲವು ಕಾರಣಗಳಿಂದ, ವಿಭಿನ್ನ ಸನ್ನಿವೇಶಗಳಿಂದ ಇಂಥ ಭಾವಗಳಿಗೆ ಬದಲಾಗುವ ನಾವು ಚೇತರಿಕೆ ಕಂಡುಕೊಳ್ಳಲು ಅನೇಕ ವೇಳೆ ಕಾಯಬೇಕಾಗುತ್ತದೆ. ಯಾವ ಕಾರಣದಿಂದಲೂ ಪುನಶ್ಚೇತನ ಸಾಧ್ಯವಿಲ್ಲದೆ ಇಡೀ ಜೀವನವೇ ಬರಡು ಎಂಬಂತೆ ಕಂಡುಬರುವ ನಿಸ್ಸಹಾಯಕ ಸ್ಥಿತಿಗೂ ದೀರ್ಘಕಾಲ ಬಲಿಯಾಗುವವರಿದ್ದಾರೆ. ಇಡೀ ಜಿವನವನ್ನೇ ಮುರುಟಿ ಹಾಕುವ ಆಘಾತಗಳು, ಸಮಸ್ಯೆಗಳು ಹಲವರ ಬದುಕನ್ನು ನರಕವಾಗಿಸುತ್ತದೆ. ಅಂಥವರ ಪಾಲಿಗೆ ಹಬ್ಬ ಹರಿದಿನ, ಹೊಸ ಕನಸು, ಪುನಶ್ಚೇತನ ಇವೆಲ್ಲವೂ ಕೇವಲ ಅರ್ಥಶೂನ್ಯ ಮಾತಾಗಿ ಬಿಡುತ್ತದೆ. ಆದರೆ ಜೀವನದ ಹೋರಾಟ, ಆನಂದದ ಅನ್ವೇಷಣೆ, ಬೆಳಕಿನತ್ತ ಹೊರಳುವ ಕ್ರಿಯೆ ಎಲ್ಲ ಜೀವಿಗಳ ಜೀವನ ಧರ್ಮವಾಗಿದೆ. ಮಾನವನೂ ಇದಕ್ಕೆ ಹೊರತಲ್ಲ. ದೂರದಲ್ಲೆಲ್ಲೋ ಹೊಸಜೀವನದ ಬೆಳಕು ಮೂಡುವುದೆಂಬ ನಿರೀಕ್ಷೆ ಅವನನ್ನು ಮುನ್ನಡೆಸುವ ಶಕ್ತಿಯಾಗಿ ಕಂಡುಬರುತ್ತದೆ. ಅನೇಕ ವೇಳೆ ಆ ನಿರೀಕ್ಷೆಯೇ ಚೈತನ್ಯದಾಯಕವಾಗಿ, ಹೊಸ ಅವಕಾಶ ಬಂದಾಗ ಮತ್ತೆ ಎಲ್ಲವನ್ನೂ ಮರೆತು ಮುನ್ನುಗ್ಗುವಂತೆ ಮಾಡುತ್ತದೆ.

### ಸಾವು, ಸೋಲು, ಅವನತಿಯ ಛಾಯೆ

ನಿಜ, ಜೀವನದಲ್ಲಿ ಇದೂ ಒಂದು ಘಟ್ಟ. ಬದುಕೇ ದುಸ್ತರವಾಗುವಂತೆ ಅನ್ನಿಸುವ ಕ್ಷಣಗಳೂ ಇವೆ. ಪ್ರಪಂಚದಲ್ಲಿ ಎಲ್ಲ ವಸ್ತುಗಳಿಗೂ, ಜೀವಿಗಳಿಗೂ, ವ್ಯಕ್ತಿಗಳಿಗೂ ಒಂದು ಹುಟ್ಟು, ಒಂದು ಆರಂಭವಿರುವಂತೆ ಒಂದು ಕೊನೆ ಇರುವುದೂ ಸಹಜವೆ. ಆದರೆ ಈ ಸಹಜತೆ ಎಷ್ಟೊಂದು ಕಠಿಣ, ಎಷ್ಟೊಂದು ಕ್ರೂರ! ಹೊಸ ಜನನದಲ್ಲಿ ಮಗು ಕಣ್ತೆರೆದು ನೋಡುವ ಜಗತ್ತು ಅನೇಕ ವಿಸ್ಮಯ, ಅದ್ಭುತ, ಬೆರಗುಗಳಿಂದ ಕೂಡಿದೆ; ಅಂತೆಯೇ ಮಗುವಿಗೆ ಎಲ್ಲವೂ ಹೊಸದು, ಅಚ್ಚರಿ. ಅದೇ ಮಗು ಬೆಳೆದು ದೊಡ್ಡವನಾಗಿ ಮುಂದೆ ಹಲವು ವರ್ಷ ಬಾಳಿ, ಮುಪ್ಪಿನೆಡೆಗೆ, ಹೊರಳುತ್ತದೆ. ಮೃತ್ಯುವೆಂಬ ಕರಾಳಛಾಯೆ ನಿಧಾನವಾಗಿ ಆತನ ಬೆನ್ನ ಹಿಂದೆ ಬಂದು ಆವರಿಸತೊಡಗುತ್ತದೆ. ತಾನು ಕಂಡ ಜಗತ್ತು, ಪಡೆದ ಅನುಭವ, ನಡೆಸಿದ ಹೋರಾಟ, ಸಾಕಾರಗೊಳ್ಳದ ಕನಸುಗಳು – ಎಲ್ಲವೂ ಆ ಕ್ಷಣದಲ್ಲಿ ಬರೀ ಮಿಥ್ಯೆಯೆಂಬಂತೆ ಭಾಸವಾಗುತ್ತದೆ. ಅನಿವಾರ್ಯವಾಗಿ ಎದುರಿಸಲೇಬೇಕಾದ ಸಾವೆಂಬ ಕ್ರೂರ ಸತ್ಯವು ಅರಗಿಸಿಕೊಳ್ಳಲಾಗದ ವಾಸ್ತವವಾಗಿ ಕಾಡುತ್ತದೆ.

ಮಾನವನ ಗಮನದಲ್ಲಿ ಮೇಲ್ಮುಖವಾಗಿ ಸಾಗುವ ಹಂತವೊಂದಿದೆ; ಅಂತೆಯೇ ಇಳಿಮುಖವೂ ಒಂದು ಗತಿಯೇ ಆಗಿದೆ. ಜನನ–ಮರಣ, ಸುಖ–ದುಖ, ಉಲ್ಲಾಸ–ಚಿಂತೆ, ಈ ಬಗೆಯ ದ್ವಂದ್ವಗಳು ಜೊತೆಜೊತೆಗೆ ಬರುತ್ತವೆ. ಆದರೆ ನಮಗೆ ಸುಖದಾಯಕವಾದ ಅನುಭವಗಳಂತೆ, ಅದಕ್ಕೆ ಪ್ರತಿಬಿಂಬದಂತಿರುವ ಅವನತಿಯ ಅನುಭವಗಳು ಆಪ್ಯಾಯಮಾನವೆನಿಸದೆ, ಎಲ್ಲ ಆನಂದ–ಉಲ್ಲಾಸಗಳನ್ನೂ ಸೋಲು, ನೋವು, ಕಾಠಿಣ್ಯಗಳು ನಾಶಗೊಳಿಸುವಂತೆ ಅನ್ನಿಸತೊಡಗಿ, ಇಡೀ ಜೀವನವೇ ಬರಡಾಯಿತೆಂದು ಭಾವಿಸುತ್ತೇವೆ. ಹೇಗೆ ಆನಂದ, ಗೆಲುವು, ಸುಖಗಳನ್ನು ಸ್ವಾಗತಿಸುವೆವೋ ಅಂತೆಯೇ ಕಷ್ಟ, ಸೋಲು, ದುಃಖ, ಅವನತಿಯನ್ನೂ ಸ್ವಾಗತಿಸಲಾರೆವೆ? 'ಸುಖದುಃಖೇ ಸಮೇ ಕೃತ್ವಾ' ಎಂದು ಗೀತೆಯಲ್ಲಿ ಹೇಳಿದಂತೆ, ಅಥವಾ 'ಮರಣವನ್ನೂ ಸ್ವಾಗತಿಸಿ' ಎಂದು ಸ್ವಾಮೀಜಿ ಹೇಳಿದಂತೆ ಎರಡನ್ನೂ ಸ್ವೀಕರಿಸುವ ಮನೋಭಾವವನ್ನು ನಾವು ಹೊಂದಲಾರೆವೆ? ತಾತ್ತ್ವಿಕ ಪ್ರವೃತ್ತಿಯ, ಆಧ್ಯಾತ್ಮಿಕ ಮನೋಭಾವದ ವ್ಯಕ್ತಿಗಳಿಗೆ ಇದು ಸಾಧ್ಯವಾಗಬಹುದು; ಆದರೆ ಸಾಮಾನ್ಯರ ಪಾಡೇನು? ಸಿಹಿ–ಕಹಿ ಎರಡನ್ನೂ ನುಂಗುವ ಮನಃಸ್ಥಿತಿ ಅವರಿಗೆ ಸಹಜವೆ?

### ಮತ್ತೆ ಮರಳುವ ಹೊಸ ಹರುಷ

ಯುಗಾದಿ ಹಬ್ಬದ ಸಂದರ್ಭದಲ್ಲಿ ಬೇವು–ಬೆಲ್ಲ ಎರಡನ್ನೂ ಮಿಶ್ರಣ ಮಾಡಿ ಹಂಚುವ ಪದ್ಧತಿಯಿದೆ. ಜೀವನದ ಸಿಹಿ, ಕಹಿ ಎರಡನ್ನೂ ಸಮಾನವಾಗಿ ಸ್ವೀಕರಿಸಬೇಕೆಂಬ ಅರ್ಥವನ್ನು ಇದು ಹೇಳುತ್ತದೆ. ಇದನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳುತ್ತಾರೆ. ಬದುಕಿನ ದುಸ್ತರ ದಿನಗಳಲ್ಲಿ ನೆನಪಿಸಿಕೊಳ್ಳಬೇಕಾದ ತತ್ತ್ವವೇ ಇದು—ಎಲ್ಲ ನೋವಿನ ದುಃಖದ ಕ್ಷಣಗಳೂ ಮಾಯವಾಗಲೇಬೇಕು, ಮತ್ತೆ ಹೊಸ ಹರುಷದ ದಿನಗಳು ಬಂದೇಬರುತ್ತವೆ. ಅದರ ನಿರೀಕ್ಷೆ, ನೆನಪುಗಳಲ್ಲಿ ಸದ್ಯದ ಕಷ್ಟವನ್ನು ಮರೆಯಬೇಕು. ಅಂತೆಯೇ ಸುಖದ ಹುಮ್ಮಸ್ಸಿನಲ್ಲಿ ಕೂಡ. ಅಂಥ ಸುಖದ ಅವಧಿ

ಶಾಶ್ವತವಲ್ಲ; ಆದರೆ ಮುಂದೆ ಬರಲಿರುವ ವಿರುದ್ಧ ಸನ್ನಿವೇಶವನ್ನು ಎದುರಿಸಲು, ಕಷ್ಟವನ್ನು ಸಹಿಸಿಕೊಳ್ಳಲು ಮಾನಸಿಕವಾಗಿ ತಯಾರಾಗಬೇಕು. ಇದು ಬದುಕಿನ ಅನುಭವಗಳು ಕಲಿಸುವ ಪಾಠ. ಏರಿಳಿತಗಳಿಲ್ಲದ, ಶಾಂತ ಮಂದ್ರ ಮನಃಸ್ಥಿತಿಯೇ ನಿಜವಾದ ಸ್ಥಾಯೀಭಾವ; ಅರಿವಿನಿಂದ ಕೂಡಿದ ಅಂಥ ಮನೋದಾರ್ಢ್ಯವೇ ನಿಜವಾದ ಜೀವನಯೋಗ. ಬದುಕು ನಮಗೆ ಕಲಿಸಿಕೊಡುವ ಸಮತ್ವದ ವೇದಾಂತವಿದು.

### ವೀರಯೋಧನ ಹುಮ್ಮಸ್ಸು

ಜೀವನವೊಂದು ಹೋರಾಟದಂತೆ. ಯುದ್ಧದಲ್ಲಿ ಮುನ್ನುಗ್ಗುವ ಯೋಧ ಸಾವಿಗೆ ಅಂಜುವುದಿಲ್ಲ; ತನ್ನ ಬಳಿಯಲ್ಲೇ ಸಹೋದರನೊಬ್ಬ ಸತ್ತು ಬಿದ್ದರೂ ಲೆಕ್ಕಿಸುವುದಿಲ್ಲ. ಕೊನೆಯ ಉಸಿರಿನವರೆಗೂ ಹೋರಾಡುವ ದೃಢನಿಶ್ಚಯ ಅವನದು. ಬದುಕೆಂಬ ಈ ರಣರಂಗದಲ್ಲಿ ಸೋಲು, ಹಿಮ್ಮೆಟ್ಟುವಿಕೆ, ಅವನತಿ, ಅಪಮಾನಗಳು ಎದುರಾದರೆ, ಅಂಜಿ ಎದೆಗೆಡುವ ಭಾವನೆ ತರವಲ್ಲ. ನಿರಂತರ ಹುಮ್ಮಸ್ಸು, ಸ್ಫೂರ್ತಿ, ಧೈರ್ಯ, ಸಾಹಸಗಳನ್ನು ಹೊಂದಿರುವವರು ಮಾತ್ರ ಬದುಕಿನ ಕ್ರೂರ ಆಘಾತಗಳನ್ನು ಮೆಟ್ಟಿ ನಿಲ್ಲಬಲ್ಲರು. ಸ್ವಾಮಿ ವಿವೇಕಾನಂದರ ನುಡಿಗಳು ಇಂಥ ಮನಃಸ್ಥಿತಿಯನ್ನು ಹೊಂದಲು ಪ್ರೇರಣೆ ನೀಡುತ್ತವೆ: ''ಸೋಲುವುದು, ಸ್ವಲ್ಪ ಹಿಂದೆ ಜಾರುವುದು, ಇವನ್ನು ನೀವು ಗಮನಿಸಬೇಕಿಲ್ಲ. ಸಾವಿರ ವೇಳೆ ಆದರ್ಶವನ್ನು ಹಿಡಿದುಕೊಳ್ಳಿ. ಸಾವಿರ ಸಲ ಸೋತರೂ ಮತ್ತೊಮ್ಮೆ ಪ್ರಯತ್ನಿಸಿ.'' ಇನ್ನೊಂದೆಡೆ ಅವರು ಹೊಸ ಪೀಳಿಗೆಯ ಯುವಕರನ್ನು ಹುರಿದುಂಬಿಸುತ್ತಾ, ''ಜಯ ಹೊಂದಬೇಕಾದರೆ ಅತ್ಯದ್ಭುತವಾದ ಇಚ್ಛಾಶಕ್ತಿ ಛಲ ಇವುಗಳು ಬೇಕು. 'ಸಾಗರವನ್ನೇ ಕುಡಿಯುತ್ತೇನೆ' 'ಪರ್ವತಗಳು ಧೂಳಿಧೂಸರವಾಗುವವು, ನನ್ನ ಇಚ್ಛಾಶಕ್ತಿಯಿಂದ' ಎನ್ನುವವನು ಛಲಗಾರ. ಅಂತಹ ಶಕ್ತಿ ಇರಲಿ, ಅಂತಹ ಶಪಥವಿರಲಿ. ಕಷ್ಟಪಟ್ಟು ಸಾಧನೆ ಮಾಡಿ. ನೀವು ಗುರಿಯನ್ನು ಸೇರಿಯೇ ಸೇರುತ್ತೀರಿ'' ಎನ್ನುತ್ತಾರೆ. ಪ್ರಪಂಚದ ಎಲ್ಲ ದೇಶಗಳಿಗಿಂತಲೂ ಭಾರತದ ಯುವಜನತೆಯೇ ಮುಂದಿನ ದಿನಗಳಲ್ಲಿ ನಿರ್ಣಾಯಕ ಮಹತ್ಕಾರ್ಯಗಳನ್ನು ಮಾಡುವುದು ಎಂಬ ಅಭಿಪ್ರಾಯ ಎಲ್ಲೆಡೆ ಪ್ರಚಲಿತವಾಗಿದೆ. ಆದರೆ ಅಂಥ ಮಹತ್ಕಾರ್ಯಗಳು ಸರಿಯಾದ ಮಾರ್ಗದಲ್ಲಿ, ಸಮರ್ಪಕವಾದ ರೀತಿಯಲ್ಲಿ ನಡೆಯಲು ಸ್ವಾಮಿ ವಿವೇಕಾನಂದರ ಸ್ಫೂರ್ತಿಯ ನುಡಿಗಳು ಅತ್ಯಂತ ಆರೋಗ್ಯಕರ ಪ್ರೇರಣೆ, ಸ್ಫೂರ್ತಿ ನೀಡಬಲ್ಲವು; ಹುಮ್ಮಸ್ಸಿನ ಜೀವನಕ್ಕೆ ಶಕ್ತಿಸಂಚಾರ ಮಾಡಬಲ್ಲವು. ✿

# ಅಭ್ಯಾಸಯೋಗ



❁ ಭಗವಂತನ ನಾಮಗುಣ ಕೀರ್ತನೆ ಮಾಡುವ ಅಭ್ಯಾಸ ಇಟ್ಟುಕೊಂಡಿದ್ದರೆ ಕ್ರಮೇಣ ಭಕ್ತಿ ಉಂಟಾಗಿಬಿಡುತ್ತದೆ. ಭಗವಂತನ ಹೆಸರು ಹೇಳಲು ಲಜ್ಜೆಪಟ್ಟುಕೊಳ್ಳಬಾರದು. 'ಲಜ್ಜೆ, ದ್ವೇಷ, ಭಯ ಇವು ಮೂರು ಇರಬಾರದು.'

❁ ಪ್ರತಿದಿನವೂ ಅಭ್ಯಾಸಮಾಡುತ್ತಿರಬೇಕು. ಅಂದು ಸರ್ಕಸ್ಸಿಗೆ ಹೋಗಿದ್ದೆ. ಅಲ್ಲಿ ನೋಡಿ ಬಂದೆ, ಒಂದು ಕುದುರೆ ಬಹಳ ವೇಗವಾಗಿ ಓಡುತ್ತಿದ್ದುದನ್ನು ಮತ್ತು ಅದರ ಮೇಲೆ ಒಬ್ಬ ಇಂಗ್ಲೀಷು ಮಹಿಳೆ ಒಂಟಿಕಾಲಿನಲ್ಲಿ ನಿಂತುಕೊಂಡಿರುತ್ತಿದ್ದುದನ್ನು. ಹಾಗೆ ಮಾಡಬೇಕಾದರೆ ಆಕೆ ಎಷ್ಟು ಕಾಲ ಅಭ್ಯಾಸ ಮಾಡಿರಬೇಕು! ಹೋಗಲಿ, ಭಗವಂತನ ದರ್ಶನ ಬೇಕೆಂದು ಒಮ್ಮೆಯಾದರೂ ಅಳು. ಇವೆರಡೂ ಅದಕ್ಕೆ ಸಾಧನ: ಅಭ್ಯಾಸ ಮತ್ತು ಅನುರಾಗ, ಅಂದರೆ ಆತನ ದರ್ಶನ ಪಡೆಯಬೇಕೆಂಬ ವ್ಯಾಕುಲತೆ.

❁ ಅಭ್ಯಾಸಯೋಗದಿಂದ ಕಾಮಕಾಂಚನಾಸಕ್ತಿಯನ್ನು ತ್ಯಾಗಮಾಡಲು ಸಾಧ್ಯ. ಗೀತೆಯಲ್ಲಿ ಹೀಗೆಂದು ಹೇಳಿದೆ: ಅಭ್ಯಾಸದಿಂದ ಮನಸ್ಸು ಅಸಾಧಾರಣ ಶಕ್ತಿಯನ್ನು ಗಳಿಸಿಕೊಳ್ಳುತ್ತದೆ. ಆಗ ಇಂದ್ರಿಯ ಸಂಯಮ ಮಾಡಲು–ಕಾಮ ಕ್ರೋಧಾದಿಗಳನ್ನು ವಶಪಡಿಸಿಕೊಳ್ಳಲು ಕಷ್ಟವಾಗುವುದಿಲ್ಲ. ಅಂಥ ಮನುಷ್ಯ ಆಮೆಯಂತೆ ವರ್ತಿಸುತ್ತಾನೆ. ಆಮೆ ಒಮ್ಮೆ ತನ್ನ ಕೈ ಕಾಲುಗಳನ್ನು ಒಳಕ್ಕೆ ಸೆಳೆದುಕೊಂಡಿತೆಂದರೆ ಮತ್ತೆ ಅದು ಹೊರಕ್ಕೆ ಬಿಡದು. ಕೊಡಲಿ ತೆಗೆದುಕೊಂಡು ಅದನ್ನು ಚೂರು ಚೂರು ಮಾಡಿದರೂ ಅದು ಅವನ್ನು ಹೊರಕ್ಕೆ ಬಿಡದು.

❁ ಸತತ ಭಗವಂತನ ನಾಮಗುಣಕೀರ್ತನೆ ಮತ್ತು ಪ್ರಾರ್ಥನೆ ಮಾಡುತ್ತಿರಬೇಕು. ಹಳೇ ಚೊಂಬನ್ನು ದಿನವೂ ಬೆಳಗುತ್ತಿರಬೇಕು. ಎಲ್ಲೋ ಒಂದು ದಿನ ಬೆಳಗಿಬಿಟ್ಟರೆ ಏನಾದ ಹಾಗಾಯಿತು? ವಿವೇಕ ವೈರಾಗ್ಯಗಳಿಂದ ಒಡಗೂಡಿರಬೇಕು; ಈ ಸಂಸಾರ ಅನಿತ್ಯ ಎಂಬ ಜ್ಞಾನವನ್ನು ಮನಸ್ಸಿಗೆ ಚೆನ್ನಾಗಿ ಒತ್ತಬೇಕು.

❁ ಭಗವನ್ನಾಮೋಚ್ಚಾರಣೆಯಿಂದ ಮನುಷ್ಯ ಪವಿತ್ರನಾಗಿಬಿಡುತ್ತಾನೆ. ಆದ್ದರಿಂದ ನಾಮಕೀರ್ತನೆಯ ಅಭ್ಯಾಸವನ್ನಿಟ್ಟುಕೊಂಡಿರಬೇಕು. ನಾನು ಯದುಮಲ್ಲಿಕನ ತಾಯಿಗೆ ಹೇಳಿದೆ: ''ಪ್ರಾಪಂಚಿಕನಿಗೆ ಸಾಯುವ ಸಮಯದಲ್ಲಿ ಸಂಸಾರದ – ಎಂದರೆ ಹೆಂಡತಿ ಮಕ್ಕಳು ಮರಿಗಳ, ಉಯಿಲು ಬರೆದಿಡುವುದು ಇವೇ ಮೊದಲಾದುವುಗಳ ಯೋಚನೆಗಳೇ ಬರುತ್ತವೆ. ಭಗವದ್ಭಾವನೆ ಮನಸ್ಸಿನಲ್ಲಿ ಏಳದು. ಇದಕ್ಕೆ ಮಾರ್ಗ ಬದುಕಿರುವಾಗ ನಾಮಜಪ ಕೀರ್ತನೆಯ ಅಭ್ಯಾಸವನ್ನಿಟ್ಟುಕೊಂಡಿರುವುದೇ. ಈ ಅಭ್ಯಾಸವನ್ನು ಇಟ್ಟುಕೊಂಡಿದ್ದುದೇ ಆದರೆ ಸಾಯುವ ಸಮಯದಲ್ಲಿ ಭಗವನ್ನಾಮ ಬಾಯಿಂದ ಹೊರಡುತ್ತದೆ. ಗಿಳಿಯನ್ನು ಬೆಕ್ಕು ಹಿಡಿಯಿತು ಎಂದರೆ ಆಗ ಅದು ''ಕ್ಯಾ, ಕ್ಯಾ'' ಅಂತ ಕೂಗಿಕೊಳ್ಳುತ್ತದೆಯೇ ವಿನಾ, ''ರಾಮ, ರಾಮ, ಹರೇ ಕೃಷ್ಣ!'' ಅಂತ ಹೇಳುವುದಿಲ್ಲ.

❁ ಶಿಷ್ಯ: ''ಸಂಸಾರದಲ್ಲಿ ಇದ್ದು ಭಗವಂತನ ಕಡೆಗೆ ಹೋಗುವುದೆಂದರೆ ಬಹಳ ಕಷ್ಟ.''

ಶ್ರೀರಾಮಕೃಷ್ಣರು: ''ಅಭ್ಯಾಸಯೋಗವಿದೆಯಲ್ಲ! ಕಾಮಾರಪುಕುರಿನಲ್ಲಿ ಬಡಗಿಯ ಹೆಂಗಸರು ಅವಲಕ್ಕಿ ವ್ಯಾಪಾರ ಮಾಡುತ್ತಾರೆ. ಅವರು ಎಷ್ಟು ಕಡೆಗೆ ಕಣ್ಣಿಟ್ಟು ಕೆಲಸ ಮಾಡುತ್ತಾರೆ ಎಂಬುದನ್ನು ಸ್ವಲ್ಪ ಕೇಳು. ಏತ ಅವಲಕ್ಕಿಯನ್ನು ಕುಟ್ಟುತ್ತಲೇ ಇರುತ್ತದೆ. ಹೆಂಗಸು ಒಂದು ಕೈಯಿಂದ ಒರಳಿಗೆ ಬತ್ತವನ್ನು ತಳ್ಳಿಕೊಡುತ್ತಿರುತ್ತಾಳೆ. ಇನ್ನೊಂದು ಕೈಯಿಂದ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಹಾಲುಕೊಡುತ್ತಿರುತ್ತಾಳೆ. ಸಾಲದುದಕ್ಕೆ ಅದೇ ಸಮಯಕ್ಕೆ ಗಿರಾಕಿಗಳು ಬೇರೆ ಬಂದಿರುತ್ತಾರೆ. ಆ ಕಡೆ ಏತ ಬತ್ತವನ್ನು ಕುಟ್ಟುತ್ತಲೇ ಇರುತ್ತದೆ. ಈ ಕಡೆ ಗಿರಾಕಿಗಳೊಡನೆ ವ್ಯಾಪಾರ ಮಾಡುತ್ತಿರುತ್ತಾಳೆ. 'ಬಾಕಿ ಏನು ಕೊಡಬೇಕಾಗಿದೆಯೊ ಅದನ್ನು ಮೊದಲು ಕೊಟ್ಟು ಬಳಿಕ ಸಾಮಾನು ತೆಗೆದುಕೊಂಡು ಹೋಗಿ.' ಹಾಗೇ ನೋಡು, ಮಗುವಿಗೆ ಹಾಲು ಕೊಡುವುದು, ಒರಳಿಗೆ ಬತ್ತವನ್ನು ತಳ್ಳುವುದು, ಅವಲಕ್ಕಿಯಾದ ನಂತರ ಅದನ್ನು ಒರಳಿನಿಂದ ಹೊರಕ್ಕೆ ತೆಗೆಯುವುದು, ಗಿರಾಕಿಗಳೊಡನೆ ವ್ಯಾಪಾರ ಮಾಡುವುದು – ಇಷ್ಟನ್ನೂ ಒಟ್ಟಿಗೆ ಮಾಡುತ್ತಾಳೆ. ಇದಕ್ಕೇ ಅಭ್ಯಾಸಯೋಗ ಅಂತ ಹೆಸರು. ಆದರೂ ಏತದ ಮೊನೆ ಎಲ್ಲಿ ಕೈಯನ್ನು ಜಜ್ಜಿಬಿಡುವುದೋ ಎಂದು ಆಕೆ ತನ್ನ ಮನಸ್ಸಿನ ಹದಿನೈದು ಆಣೆ ಭಾಗವನ್ನು ಒರಳ ಕಡೆಗೇ ಇಟ್ಟಿರುತ್ತಾಳೆ. ಉಳಿದುಕೊಂಡಿರುವ ಆ ಒಂದಾಣೆ ಮನಸ್ಸಿನಿಂದ ಮಗುವಿಗೆ ಹಾಲು ಕೊಡುವುದು, ಗಿರಾಕಿಗಳೊಡನೆ ವ್ಯಾಪಾರ ಮಾಡುವುದು ಇವೇ ಮೊದಲಾದ ಕೆಲಸಗಳನ್ನು ಮಾಡುತ್ತಾಳೆ. ಅದೇ ರೀತಿ ಯಾರು ಸಂಸಾರಸ್ಥರೊ ಅವರು ತಮ್ಮ ಮನಸ್ಸಿನ ಹದಿನೈದು ಆಣೆ ಭಾಗವನ್ನು ಭಗವಂತನಿಗೆ ಮೀಸಲಾಗಿ ಇಡಬೇಕು; ಉಳಿದ ಒಂದಾಣೆ ಮನಸ್ಸಿನಿಂದ ಬಾಕಿ ಎಲ್ಲಾ ಕೆಲಸ ಕಾರ್ಯಗಳನ್ನೂ ಮಾಡಿಕೊಳ್ಳಬೇಕು.

❁ ಅಭ್ಯಾಸಯೋಗ ಇದೆಯಲ್ಲ; ಅಭ್ಯಾಸ ಮಾಡು, ನೋಡುವೆಯಂತೆ, ಮನಸ್ಸು ನೀನು ಬೇಕು ಅಂದ ಕಡೆಗೇ ಹೋಗುತ್ತದೆ. ಮನಸ್ಸೆಂಬುದು ಅಗಸನ ಮನೆಯಿಂದ ಬಂದ ಬಟ್ಟೆಯ ಹಾಗೆ. ಯಾವ ಬಣ್ಣದಲ್ಲಿ ಅದ್ದುತ್ತೀಯೋ ಆ ಬಣ್ಣವನ್ನು ಅದು ಹಿಡಿದುಕೊಂಡುಬಿಡುತ್ತದೆ.

**ಶ್ರೀರಾಮಕೃಷ್ಣ ವಚನವೇದದಿಂದ**

# ಶ್ರೀರಾಮಕೃಷ್ಣರ ನೆನಪುಗಳು

**ಭವತಾರಿಣೀ ದೇವಿ**



ಡಿಸೆಂಬರ್ ೨೦೧೪ರ 'ವಿವೇಕಪ್ರಭ' ಸಂಚಿಕೆಯಲ್ಲಿ ಭವತಾರಿಣೀ ದೇವಿ (೧೮೭೭–೧೯೭೩) ಶ್ರೀಮಾತೆಯವರನ್ನು ಕುರಿತು ಬರೆದ ಸ್ಮೃತಿಚಿತ್ರ ಪ್ರಕಟವಾಗಿತ್ತು. ಅವಳು ಶ್ರೀರಾಮಕೃಷ್ಣರನ್ನು ಕುರಿತು ಹೇಳಿದ ನೆನಪಿನ ಚಿತ್ರ ಇಲ್ಲಿದೆ. ಬೆಂಗಳೂರು ಶ್ರೀರಾಮಕೃಷ್ಣ ಮಠದಲ್ಲಿ ೧೯೫೫ರ ಜುಲೈ ೨೬ರಂದು ನೀಡಿದ ಭಾಷಣದಿಂದ ಆಯ್ದ ಭಾಗಗಳಿವು. ಆಗ ಬೆಂಗಳೂರು ಮಠದ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ಯತೀಶ್ವರಾನಂದರು ಅದನ್ನು ಬಂಗಾಳಿಯಿಂದ ಇಂಗ್ಲೀಷಿಗೆ ಅನುವಾದಿಸಿ, ಲಂಡನ್‌ನಿಂದ ಹೊರಬರುತ್ತಿದ್ದ Vedanta and the West ಪತ್ರಿಕೆಗೆ (ಈಗ ಅದು 'Vedanta' ಎಂಬ ಹೆಸರಿನಿಂದ ಪ್ರಕಟವಾಗುತ್ತಿದೆ) ಕಳುಹಿಸಿಕೊಟ್ಟರು. ಈ ಪತ್ರಿಕೆಯ ೧೯೬೮ರ ಸೆಪ್ಟೆಂಬರ್–ಅಕ್ಟೋಬರ್ ಸಂಚಿಕೆಯಲ್ಲಿ ಇದು ಪ್ರಕಟವಾಯಿತು. ಶ್ರೀರಾಮಕೃಷ್ಣರ ಶಿಷ್ಯಂದಿರು ಬರೆದ ಹಲವಾರು ಸ್ಮೃತಿಸಂಗ್ರಹಗಳಿಗೆ ಇದು ಒಂದು ಉತ್ತಮ ಸೇರ್ಪಡೆಯಾಗಿದೆ.

ಭವತಾರಿಣೀದೇವಿ ಶ್ರೀರಾಮಕೃಷ್ಣರನ್ನು ಮೊದಲಬಾರಿ ಭೇಟಿಯಾದಾಗ ಅವಳಿಗೆ ಎಂಟು ವರ್ಷ ವಯಸ್ಸಾಗಿತ್ತು. ಆ ಭೇಟಿ ಅವಳ ಇಡೀ ಜೀವನವನ್ನೇ ಬದಲಾಯಿಸಿತು. ಅವಳ ತಾಯಿ ಶ್ರೀರಾಮಕೃಷ್ಣರ ಸಂಬಂಧಿಕಳಾಗಿದ್ದಳು. ಅವರ ಇನ್ನೊಬ್ಬ ಸಂಬಂಧಿಕರ ಹುಡುಗನಾದ ಉಪೇಂದ್ರನಾಥನೊಂದಿಗೆ ಭವತಾರಿಣಿಯ ಮದುವೆಯನ್ನು ಶ್ರೀರಾಮಕೃಷ್ಣರೇ ಏರ್ಪಡಿಸಿದರು. ತುಂಬ ಬಡತನದಲ್ಲಿ ಬೆಳೆದ ಉಪೇಂದ್ರನಾಥ ಮುಂದೆ ಕಲ್ಕತ್ತೆಯ ಪ್ರಮುಖ ಪ್ರಕಾಶಕನಾಗಿ ಬಹಳ ಯಶಸ್ಸನ್ನು ಕಂಡ. [ಇವನ ಪ್ರಕಟಣಾಲಯದಲ್ಲೇ ಲಾಟು ಮಹಾರಾಜ್ (ಸ್ವಾಮಿ ಅದ್ಭುತಾನಂದರು) ಅನೇಕ ತಿಂಗಳ ಕಾಲ ಮಲಗಿ ನಿದ್ರಿಸುತ್ತಿದ್ದರು.] ತಮ್ಮ ಕೊನೆಯ ದಿನಗಳಲ್ಲಿ ತನ್ನ ಪತಿ, ಪುತ್ರ ಹಾಗೂ ಮೊಮ್ಮಗನನ್ನು ಕಳೆದುಕೊಂಡ ಭವತಾರಿಣೀದೇವಿ, ಕಾಶಿಯಲ್ಲಿ ತಪಸ್ವಿನಿಯಂತೆ ಏಕಾಂಗಿಯಾಗಿ ಬದುಕಿದಳು.

ನನಗೆ ಎಂಟು ವರ್ಷ ವಯಸ್ಸಾಗಿದ್ದಾಗ ಒಮ್ಮೆ ಠಾಕೂರರು (ಶ್ರೀರಾಮಕೃಷ್ಣರು) ನಮ್ಮ ಮನೆಗೆ ಊಟಕ್ಕೆ ಬಂದಿದ್ದರು. ಆಟವಾಡುತ್ತ ತುಂಟತನದಿಂದ ಸುತ್ತಮುತ್ತ ಓಡಾಡುತ್ತಿದ್ದ ನನ್ನನ್ನು ಹಿಡಿದು ತರಲು ನನ್ನ ತಾಯಿ ಸೇವಕಿಗೆ ಹೇಳಿದಳು. ಠಾಕೂರರು ನನ್ನ ಹೆಸರೇನೆಂದು ಕೇಳಿದರು. ಆಗ ತಾಯಿ, 'ಹುಬಿ' (ಅಂದರೆ 'ನಿಧಾನ ಮಾತು ಕಲಿತವಳು' ಎಂದರ್ಥ. ಬೇಗನೆ ಮಾತು ಕಲಿಯದ ಮಕ್ಕಳಿಗೆ ಹಾಗನ್ನುತ್ತಿದ್ದರು) ಎಂದಳು. ನನ್ನ ಹೆಸರನ್ನು ಬದಲಾಯಿಸಬೇಕೆಂದು ಠಾಕೂರರು ಬಯಸಿದರು. ಆಗ ಸಾಮಾನ್ಯವಾಗಿ ಹೆಣ್ಣುಮಕ್ಕಳಿಗೆ ಹೂವಿನ ಹೆಸರಿಡುತ್ತಿದ್ದರು; ಆದರೆ ಠಾಕೂರರು ನನಗೆ 'ಭವತಾರಿಣಿ' ಎಂಬ ಹೆಸರನ್ನು ಕೊಟ್ಟರು. ದಕ್ಷಿಣೇಶ್ವರದ ಜಗನ್ಮಾತೆಯ ಹೆಸರು ಅದು.

ನನಗೆ ಎಂಟು ವರ್ಷವಿದ್ದಾಗಲೇ ಇನ್ನೊಮ್ಮೆ ಠಾಕೂರರು ನಮ್ಮ ಮನೆಗೆ ಊಟಕ್ಕೆ ಬಂದರು. ಆಗ ಅವರು ನನಗೆಷ್ಟು ವರ್ಷ ವಯಸ್ಸು ಎಂದು ನನ್ನ ತಾಯಿಯನ್ನು ಕೇಳಿದರು. ''ಎಂಟು ವರ್ಷ'' ಎಂದರು ನನ್ನ ತಾಯಿ. ಆಗ ಠಾಕೂರರು, ''ನಿನ್ನ ಮಗಳಿಗೆ ಎಂಟು ವರ್ಷವಾಯಿತು. ಅವಳಿಗೆ ಮದುವೆ ಮಾಡಬೇಕು.(ಅಂದರೆ, ನಿಶ್ಚಿತಾರ್ಥ ನಡೆಯಬೇಕು) ಅವಳಿಗಾಗಿ ತಕ್ಕದಾದ ಒಂದು ಸಂಬಂಧವಿದೆ'' ಎಂದರು. ನನ್ನ ತಾಯಿ ಅದನ್ನೊಪ್ಪಿ, ವರ ಯಾರೆಂದು ಕೇಳಿದರು. ಠಾಕೂರರು, ''ಅವನು ಅಷ್ಟೇನೂ ಕಲಿತಿಲ್ಲ'' ಎಂದರು. ಹಾಗಾದರೆ ಅದು ಅಷ್ಟೇನೂ ಒಳ್ಳೆಯದಲ್ಲವೆಂದು ನನ್ನ ತಾಯಿ ಹೇಳಿದರು. ಆದರೂ ಠಾಕೂರರು ಒತ್ತಾಯಿಸುತ್ತ, ನಾನು 'ಲಕ್ಷ್ಮಿ'ಯೇ ಆಗಿದ್ದೇನೆಂದೂ, ಈ ಮದುವೆಯಿಂದ ಮುಂದೆ ಆ ಹುಡುಗನಿಗೆ ತುಂಬಾ ಉನ್ನತಿಯಾಗುವುದೆಂದೂ ಹೇಳಿದರು.

ಒಂದು ದಿನ ಉಪೇಂದ್ರನಾಥನ ತಾಯಿ ಠಾಕೂರರನ್ನು ನೋಡಲು ದಕ್ಷಿಣೇಶ್ವರಕ್ಕೆ ಹೋಗಿದ್ದಳು. ಅವಳಿಗೆ ಠಾಕೂರರು ಹೇಳಿದರು: ''ನಿನ್ನ ಮಗ ಈ ಹುಡುಗಿಯನ್ನು ಮದುವೆಯಾಗಬೇಕು.'' ಅದಕ್ಕೆ ಅವಳು ಒಪ್ಪಿದಳು. ಆಗ ನರೇನ್ (ಸ್ವಾಮಿ

ವಿವೇಕಾನಂದರು) ಅಲ್ಲಿದ್ದ. ''ಯಾರ ಮದುವೆ?'' ಎಂದು ಆತ ಕೇಳಿದ. ಠಾಕೂರರು ಅವನಿಗೆ ಮಾಹಿತಿ ಕೊಟ್ಟರು. ನರೇನ್ ಅದನ್ನು ವಿರೋಧಿಸಿದ; ಏಕೆಂದರೆ ನಾನು ನೋಡಲು ಲಕ್ಷಣವಾಗಿರಲಿಲ್ಲ , ನನ್ನ ಮೈಬಣ್ಣ ಕಪ್ಪು ಬೇರೆ. ಉಪೇಂದ್ರನಾಥನಿಗೆ ಬೇರೆ ಹುಡುಗಿಯನ್ನು ನೋಡಲು ಠಾಕೂರರಿಗೆ ಹೇಳಿದ. ಆದರೆ ನಾನು ಅದೃಷ್ಟದ ಹುಡುಗಿಯೆಂದೂ, ಉಪೇಂದ್ರನಾಥನು ನನ್ನನ್ನು ಮದುವೆಗೆ ಒಪ್ಪಬೇಕೆಂದೂ, ಮುಂದೆ ಅವನು ಶ್ರೀಮಂತನಾಗುವನೆಂದೂ ಠಾಕೂರರು ತಿಳಿಸಿದರು. ಉಪೇಂದ್ರನ ತಾಯಿ ಅದಕ್ಕೊಪ್ಪಿದಳು. ಇದರಿಂದ ಠಾಕೂರರ ಬಳಿ ವಾಸಿಸುತ್ತಿದ್ದ ತಮ್ಮ ಮಗ ಉಪೇಂದ್ರ ಮನೆಗೆ ಮರಳುವನೆಂದು ಅವನ ತಾಯಿ, ತಂದೆ ಇಬ್ಬರೂ ಸಂತಸಗೊಂಡರು. ಮನೆಗೆ ಸೊಸೆ ಬರುವಳೆಂದೂ ಅವರಿಗೆ ಆನಂದವಾಯಿತು.

ಮದುವೆಯಾದ ನಂತರ ನರೇನ್ ನಮ್ಮ ಮನೆಗೆ ಬರುತ್ತಿದ್ದ. ನಿಶ್ಚಿತಾರ್ಥವಾದ ಮೇಲೆ ನರೇನ್ ನನ್ನ ಮೈಬಣ್ಣ ಕಪ್ಪು ಇತ್ಯಾದಿ ನನ್ನನ್ನು ಕುರಿತು ಆಡಿಕೊಂಡಿದ್ದ ವಿಚಾರ ನನ್ನ ಕಿವಿಗೆ ಬಿದ್ದಿತ್ತು. ನಾನು ಅವನ ಮೇಲೆ ತುಂಬಾ ಕೋಪಗೊಂಡಿದ್ದೆ. ಮನೆಗೆ ಬಂದಾಗಲೆಲ್ಲ ನಾನು ಅವನ ಮುಂದೆ ಹೋಗುತ್ತಿರಲಿಲ್ಲ; ಅವನನ್ನು ಉಪಚರಿಸುತ್ತಿರಲಿಲ್ಲ , ಹಾಗೂ ಅವನಿಗೆ ಕಡಲೆ ಮೊದಲಾದ ತಿಂಡಿಪದಾರ್ಥಗಳನ್ನು ನೀಡುತ್ತಿರಲಿಲ್ಲ. ಅವನು ನನ್ನನ್ನು ಕುರಿತು ಹಾಗೆಲ್ಲ ಹೇಳಿದ್ದರಿಂದಲೇ ನಾನು ಹಾಗೆ ವರ್ತಿಸುತ್ತಿದ್ದೆ ಎಂದು ನನ್ನ ತಾಯಿ ಅವನಿಗೆ ಹೇಳಿದರು. ಆಗ ನರೇನ್ ನನ್ನೊಂದಿಗೆ ಮೆತ್ತಗೆ ಮಾತನಾಡಿ, ನನ್ನನ್ನು ಸಮಾಧಾನಪಡಿಸಿದ.

ನನ್ನ ತವರು ಮನೆಯಲ್ಲಿದ್ದಾಗ, ನಾನು ಮನೆಯೊಳಗೇ ಇರಬೇಕೆಂದೂ, ಚೆನ್ನಾಗಿ ಉಂಡುತಿಂದು ಬೆಳೆಯಬೇಕೆಂದೂ, ಇದರಿಂದ ನಾನು ಅಂದವಾಗಿ ಕಾಣಬಹುದೆಂದೂ ನನ್ನ ತಾಯಿ ಹೇಳಿದ್ದಳು. ಆದರೆ ನನ್ನ ಪುಟ್ಟ ಗೆಳತಿಯರು ಬಂದು ನನ್ನನ್ನು ಆಟಕ್ಕೆ ಕರೆಯುತ್ತಿದ್ದರು. ಅವರೊಂದಿಗೆ ಆಟವಾಡಲು ಮಧ್ಯಾಹ್ನ ಊಟವಾದ ಮೇಲೆ, ಎಲ್ಲರೂ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ನಾನು ತಪ್ಪಿಸಿಕೊಂಡು ಹೋಗುತ್ತಿದ್ದೆ. ಅವರೆಲ್ಲ ಎಚ್ಚರಗೊಳ್ಳುವ ಮೊದಲೇ ನಾನು ಮರಳಿ ಬರುತ್ತಿದ್ದೆ. ಒಂದು ದಿನ ನಾನು ಮರಳಿ ಬರುವಾಗ ಸ್ವಲ್ಪ ತಡವಾಯಿತು, ಎಲ್ಲರೂ ಎದ್ದುಬಿಟ್ಟಿದ್ದರು. ನಾನು ಈಗೇನು ಮಾಡಲಿ? ಆಗ ಠಾಕೂರರು ನಮ್ಮ ಮನೆಗೆ ಬಂದಿದ್ದರು; ನಮ್ಮ ಮನೆಯ ಪಡಸಾಲೆಯಲ್ಲಿ ಕುಳಿತಿದ್ದರು. ಮನಸ್ಸಿನಲ್ಲೇ ಯೋಚಿಸಿದೆ, 'ನಾನು ಅವರ ಬಳಿ ಹೋಗಿ ಕುಳಿತರೆ ತಂದೆಗೆ ಏನೂ ತಿಳಿಯಲಾರದು. ನಾನು ಅವರ ಬಳಿಯಲ್ಲೇ ಇದ್ದೆನೆಂದು ಭಾವಿಸುತ್ತಾರೆ.' ನಾನು ಉಗುರು ಕಡಿಯುತ್ತಿದ್ದುದನ್ನು ನೋಡಿದ ಠಾಕೂರ್, ಹಾಗೆ ಮಾಡಬಾರದೆಂದರು. ಅನಂತರ, ''ನನ್ನ ಬಗ್ಗೆ ನಿನಗೆ ಏನನ್ನಿಸುತ್ತದೆ? ನಾನು ಭಗವಂತನೇ ಎಂದು ಕೆಲವರು ಹೇಳುತ್ತಾರೆ. ಈ ಬಗ್ಗೆ ನೀನೇನು ಹೇಳುತ್ತೀಯಾ?'' ಎಂದು ಕೇಳಿದರು.

ನಾನೆಂದೆ, ''ಇಲ್ಲ, ಇಲ್ಲ ನೀವು ದೇವರಲ್ಲ. ನೀವು ನನ್ನ ಗಂಡನಿಗೆ ಗುರು.'' ಆಗ ಇದ್ದಕ್ಕಿದ್ದಂತೆ ಸುಗಂಧ ಹೊರಹೊಮ್ಮಿದಂತೆ ಅನುಭವವಾಯಿತು. ದೇವರ ಪೂಜೆ ಮಾಡಲು ಬಳಸುವ ಧೂಪದ ಸುವಾಸನೆ ಅದಾಗಿತ್ತು. ಠಾಕೂರರು ಹೇಳಿದ್ದರಲ್ಲ, 'ನಾನು ಸಾಕ್ಷಾತ್ ಭಗವಂತನೇ ಎಂದು ಕೆಲವರು ಹೇಳುತ್ತಾರೆ' ಎಂದು. ಆದ್ದರಿಂದ, ಸುವಾಸನೆ ಅವರ ಕಡೆಯಿಂದಲೇ ಬರುತ್ತಿರಬೇಕು ಎಂದು ನಾನು ಭಾವಿಸಿದೆ. ಎಲ್ಲಿಂದ ಸುವಾಸನೆ ಬರುತ್ತಿದೆ ಎಂದು ಕಂಡುಹಿಡಿಯಲು ನಾನು ಯತ್ನಿಸಿದೆ. ಹೀಗೇ ನೋಡುತ್ತ ಅವರ ಕಿವಿಗಳತ್ತ ನೋಡಿದೆ. ಅವರಿಗೆ ತುಂಬ ಸಮೀಪದಲ್ಲಿ ನಾನಿದ್ದಾಗ, ಇದ್ದಕ್ಕಿದ್ದಂತೆ ಅವರ ರೂಪವು ಉದಯಿಸುವ ಸೂರ್ಯನ ಉಜ್ವಲ ಬಣ್ಣದಲ್ಲಿ ಅದೃಶ್ಯವಾಯಿತು. ಆ ಬೆಳಕಿನ ಹಿಂದೆ ಪ್ರಕಾಶಮಾನವಾದ ನೆರಳಿನಂತೆ ಅವರ ರೂಪ ಕಾಣಿಸಿಕೊಂಡಿತು. ''ಠಾಕೂರ್, ಠಾಕೂರ್, ನೀವೇಕೆ ಹೀಗೆ ಮಾಡುತ್ತಿದ್ದೀರಿ?'' ಎಂದು ನಾನು ಕೇಳಿದೆ. ಅವರ ರೂಪ ಸಂಪೂರ್ಣ ಮಾಯವಾಗಿಬಿಟ್ಟಿತು. ಅವರ ದೇಹವನ್ನು ಭಾವಿಸಿಕೊಳ್ಳಲು ನಾನು ಯತ್ನಿಸಿದೆ, ಆದರೆ ನನಗೆ ಸಾಧ್ಯವಾಗಲಿಲ್ಲ. ನಾನು ಮತ್ತೆ ಮತ್ತೆ ಅವರನ್ನು ಕರೆದೆ, ಆದರೆ ಅವರು ಓಗೊಡಲಿಲ್ಲ. ಕೊನೆಗೆ ನಾನು ಉತ್ಕಂಠೆಯಿಂದ ಅವರನ್ನೇ ನೋಡುತ್ತ ಕುಳಿತೆ. ಹೀಗೆ ಎಷ್ಟು ಹೊತ್ತು ಕಳೆಯಿತೋ ನನಗೆ ಗೊತ್ತಾಗಲಿಲ್ಲ. ಸ್ವಲ್ಪ ಹೊತ್ತಿನ ನಂತರ ಆ ಬೆಳಕು ನಿಧಾನವಾಗಿ ಮಾಯವಾಯಿತು. ಆಗ ಮತ್ತೆ ಠಾಕೂರರನ್ನು ಸ್ಪಷ್ಟವಾಗಿ ನೋಡಿದೆ. ಆಗ ನಾನು ಉಳಿದವರನ್ನೆಲ್ಲ ಕೂಗಿ ಕರೆದಿದ್ದೆ. ಆದರೆ ಯಾರೂ ಅದನ್ನು ಕೇಳಿಸಿಕೊಳ್ಳಲಿಲ್ಲ.

ನನ್ನ ಅತ್ತೆಯೊಂದಿಗೆ ಈ ವಿಷಯವನ್ನು ತಿಳಿಸಿದಾಗ, ಅವರಿಗೆ ಈ ವಿಷಯ ಅರ್ಥವಾಯಿತು. ಅದನ್ನು ಅವರು ನಂಬಿದರು; ನನ್ನ ಪತಿ ಕೂಡ ಸಂತಸಗೊಂಡರು. ನನ್ನ ಅತ್ತೆ ನನಗೆ ಹೇಳಿದರು: ''ಮುಂದಿನ ಸಲ ನೀನು ಠಾಕೂರರನ್ನು ಭೇಟಿ ಮಾಡಿದಾಗ ಅವರ ಬಳಿ ಮಂತ್ರ ನೀಡಬೇಕೆಂದು ಪ್ರಾರ್ಥಿಸು.'' ಮಂತ್ರ ಎಂದರೇನೆಂದು ಆಗ ನನಗೆ ಅರ್ಥವಾಗಿರಲಿಲ್ಲ. ಅದು ಬಳೆಯಂತೆ ಏನೋ ಉಡುಗೊರೆಯ ವಸ್ತು ಅಥವಾ ಯಾವುದೋ ಒಂದು ಆಭರಣ ಇರಬಹುದು ಎಂದುಕೊಂಡಿದ್ದೆ.

ಇನ್ನೊಂದು ಬಾರಿ ಠಾಕೂರರು ನಮ್ಮ ಮನೆಗೆ ಬಂದಾಗ, ನಾನು ಅವರ ಬಳಿ, ''ನನ್ನ ಅತ್ತೆ ನಿಮ್ಮ ಬಳಿ ಮಂತ್ರಕ್ಕಾಗಿ ಪ್ರಾರ್ಥಿಸಲು ಹೇಳಿದರು'' ಎಂದೆ. ಅವರ ಬಳಿ ಕುಳಿತು, ''ನನಗೆ ಮಂತ್ರ ಕೊಡಿ, ಮಂತ್ರ ಕೊಡಿ'' ಎಂದೆ. ಆಗ ನಾನು ಕೇವಲ ಎಂಟು ವರ್ಷದ ಹುಡುಗಿಯಾಗಿದ್ದೆ ಎಂಬುದನ್ನಿಲ್ಲಿ ಮರೆಯಬಾರದು. ನಾನು ಒತ್ತಾಯಿಸಿದಾಗ ಠಾಕೂರರು ನನಗೆ, ''ಆಗಲಿ, ನಾನು ನಿನಗೆ ಒಂದನ್ನು ಕೊಡುತ್ತೇನೆ. ನೀನು ಶಿವನನ್ನು ನೋಡಿದ್ದೀಯಾ?'' ಎಂದರು.

''ಹೌದು'' ನಾನೆಂದೆ. ಅದಕ್ಕವರು, ''ನಿನಗೆ ಅವನು ಇಷ್ಟವಾದರೆ, ಅವನನ್ನು ಪ್ರೀತಿಸು'' ಎಂದರು. ಅವರು ಮತ್ತೆ

ಕೇಳಿದರು, ''ನೀನು ಕಾಳಿಯನ್ನು ನೋಡಿದ್ದೀಯಾ?'' ನಾನೆಂದೆ, ''ಹೌದು.'' ಅದಕ್ಕೆ ಅವರು, ''ನಿನಗವಳು ಇಷ್ಟವಾದರೆ ಅವಳನ್ನು ಪ್ರೀತಿಸು'' ಎಂದರು. ಮತ್ತೆ ಠಾಕೂರ್ ಕೇಳಿದರು, ''ನೀನು ಕೃಷ್ಣನನ್ನು ನೋಡಿದ್ದೀಯಾ? ರಾಮನನ್ನು ನೊಡಿದ್ದೀಯಾ?'' ''ಹೌದು, ನನ್ನ ತವರ ಮನೆಯಲ್ಲಿ...'' ಎಂದೆ. ಅದಕ್ಕೆ ಅವರು, ''ಅವನು ಇಷ್ಟವಾದರೆ ಅವನನ್ನು ಪ್ರೀತಿಸು.'' ಅನಂತರ ಅವರೆಂದರು, ''ನಿನಗೆ ನಾನು ಇಷ್ಟವಾದರೆ ನನ್ನನ್ನು ಪ್ರೀತಿಸು.''

''ಹೌದು, ನಿಮ್ಮನ್ನು ಪ್ರೀತಿಸುತ್ತೇನೆ'' ನಾನೆಂದೆ. ''ನಿಮ್ಮನ್ನು ತುಂಬಾ ಪ್ರೀತಿಸುತ್ತೇನೆ. ಆದರೆ ನೀವು ನನಗೆ ಮಂತ್ರ ಕೊಡದಿದ್ದರೆ ನಾನು ಮರಳಿ ಮನೆಗೆ ಹೋಗಲಾರೆ'' ಎಂದೆ. ಅದಕ್ಕೆ ಠಾಕೂರ್, ''ಆಗಲಿ, ನೀನು ಮನೆಗೆ ಹೋಗಿ ಅತ್ತೆಯನ್ನು ಕೇಳು, ನಿನಗೆ ನಾನೇನು ಕೊಡಲಿ ಅಂತ. ನನ್ನ ಬಳಿ ಅದು ಇದ್ದರೆ ನಾನು ಕೊಡುತ್ತೇನೆ. ಇಲ್ಲದಿದ್ದರೆ ನಿನಗೆ ಹಣ ಕೊಡುತ್ತೇನೆ, ನೀನು ಅದರಿಂದ ಆ ವಸ್ತುವನ್ನು ಕೊಂಡುಕೊಳ್ಳಬೇಕು. ನೋಡು, ನನ್ನ ಬಳಿ ಈಗ ಏನೂ ಇಲ್ಲ'' ಎಂದರು. ಅವರ ಜೇಬು ಖಾಲಿಯಾಗಿದ್ದುದನ್ನು ನಾನು ನೋಡಿದೆ. ಆದರೂ ನಾನೆಂದೆ, ''ನೀವು ಅದನ್ನು ನನಗೆ ಕೊಡದಿದ್ದರೆ ನಾನು ಮನೆಗೆ ಹೋಗಲಾರೆ.''

ಮನೆಗೆ ಮರಳಿದಾಗ ಅತ್ತೆಯ ಬಳಿ ನಡೆದುದೆಲ್ಲವನ್ನೂ ಹೇಳಿದೆ. ಅತ್ತೆ ತುಂಬಾ ಆನಂದಗೊಂಡು, ''ಅದೇ ಮಂತ್ರ'' ಎಂದರು.

ವರ್ಷಗಳು ಕಳೆದವು. ನಾನು ಬೆಳೆದು ನಿಂತೆ. ಅಂದು ಠಾಕೂರರನ್ನು ಉಜ್ವಲ ಬೆಳಕಿನಲ್ಲಿ ಕಂಡಾಗ ನಿಜವಾಗಿ ಏನಾಯಿತು ಎಂಬುದನ್ನು ಕೇಳಬೇಕೆಂದು ನಾನು ಬಯಸಿದೆ. ನನ್ನಲ್ಲಿ ಕುತೂಹಲ ಬೆಳೆಯಿತು, ಆದರೆ ಅವರನ್ನು ಕೇಳುವ ಅವಕಾಶ ಒದಗಿಬರಲಿಲ್ಲ.

ಕೊನೆಗೆ ಒಂದು ದಿನ ನನ್ನ ಮಾವ ನನ್ನನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋದರು. ನನ್ನನ್ನು ಶ್ರೀಮಾತೆಯವರ ಬಳಿ ಕೆಲವು ದಿನಗಳ ಮಟ್ಟಿಗೆ ಬಿಟ್ಟುಹೋಗುವಂತೆ ಠಾಕೂರರು ನನ್ನ ಮಾವನಿಗೆ ಹೇಳಿದರು. ಈಗ ಅವಕಾಶ ಮಾಡಿಕೊಂಡು ಈ ಪ್ರಶ್ನೆಯನ್ನು ಕೇಳಬೇಕೆಂದು ನಾನು ನಿರ್ಧರಿಸಿದೆ. ಆದರೆ ಅವರ ಸುತ್ತ ಯಾವಾಗಲೂ ಭಕ್ತರು ನೆರೆದಿರುತ್ತಿದ್ದರು, ಹೀಗಾಗಿ ಠಾಕೂರರೊಂದಿಗೆ ಮಾತನಾಡಲು ಸಾಧ್ಯವಾಗಲಿಲ್ಲ. ಸಂಜೆ ಅವರು ಕಾಳೀಮಂದಿರಕ್ಕೆ ಹೋಗಿ ಸಂಧ್ಯಾರತಿಯನ್ನು ನೋಡಿ ಬರುತ್ತಿದ್ದರು. ಒಂದು ದಿನ ಅವರು ಹಾಗೆ ಹೋಗಿದ್ದಾಗ ನಾನು ಅವರ ಕೋಣೆಗೆ ಹೋಗಿ ಕುಳಿತೆ. ಅವರು ಅಲ್ಲಿಗೆ ಮರಳಿದಾಗ ಆ ಪ್ರಶ್ನೆಯನ್ನು ಕೇಳಬೇಕೆಂದು ಕಾದು ಕುಳಿತೆ. ಕಾಳೀದೇವಾಲಯದಿಂದ ಮರಳಿ ಬಂದ ಅವರು, ನನ್ನ ಬಳಿಗೆ ಬಂದು ಕುಳಿತರು. ಅವರ ಬಳಿ ಪ್ರಶ್ನೆ ಕೇಳುವ ಮೊದಲೇ, ನಾನು ಮತ್ತೆ ಅವರ ರೂಪ ಬೆಳಕಿನ ಪ್ರಭೆಯಲ್ಲಿ ಮಾಯವಾದುದನ್ನು ಕಂಡೆ. ನಾನು ಮತ್ತೆ ಮತ್ತೆ ಅವರನ್ನು ಸ್ಪರ್ಶಿಸಿದೆ, ಆದರೆ ಅದರಿಂದ ಏನೂ ಆಗಲಿಲ್ಲ. ಅವರ ದೇಹ ಮೃದುವಾಗಿತ್ತು - ಎಲುಬೇ ಇಲ್ಲವೇನೋ ಎಂಬಂತೆ. ನಾನು ಪ್ರಜ್ಞೆ ಕಳೆದುಕೊಂಡೆ. ನನ್ನ ತಲೆ ಬಾಗಿ ಅವರ ಮಡಿಲ ಮೇಲೊರಗಿತು. ನನ್ನ ಪ್ರಜ್ಞೆ ಮರಳಿದಾಗ ಠಾಕೂರರು ನನ್ನ ಬೆನ್ನ ಮೇಲೆ ಕೈಯಾಡಿಸುತ್ತಿದ್ದರು. ನಾನೆಂದೆ, ''ಠಾಕೂರ್, ಠಾಕೂರ್ ನೀವು ಏನಾಗಿದ್ದೀರಿ? ನೀವು ಭಗವಂತನೆ? ನೀವು ಕೃಷ್ಣನೆ? ನೀವು ರಾಮನೆ? ನೀವು ಯಾರು ಠಾಕೂರ್?'' ಅನಂತರ ಅವರು ನನಗೆ ಕುಡಿಯಲು ನೀರು ಕೊಟ್ಟರು. ✿

## ಯುವಚೇತನ



ಇಷ್ಟೊಂದು ಕಠಿಣ ಸಾಧನೆ ಮಾಡಿದ ಮೇಲೆ, ದೇವರು ಎಲ್ಲಾ ಜೀವಿಗಳಲ್ಲೂ ಇದ್ದಾನೆ ಮತ್ತು ಅವನಿಗಿಂತ ಬೇರೆ ದೇವರಿಲ್ಲ ಎಂಬ ದಿಟವಾದ ಸತ್ಯ ನನಗೆ ಅರಿವಾಗಿದೆ. ಯಾರು ಜೀವರಿಗೆ ಸೇವೆ ಸಲ್ಲಿಸುತ್ತಾನೋ ಅವನು ದೇವರಿಗೇ ಸೇವೆ ಸಲ್ಲಿಸಿದಂತೆ.

*(ಕೃತಿಶ್ರೇಣಿ, ಸಂ.೮, ಪು.೨೪೨)*

## ಸಾಕ್ಷಾತ್ಕಾರವೇ ಧರ್ಮ

ಮಾನವನು ದೇವರಿಗೆ ಕೊಡಬಹುದಾದ ಮಹಾ ನಾಮವೇ ಸತ್ಯ ಎಂಬುದು. ಸತ್ಯವು ಸಾಕ್ಷಾತ್ಕಾರದ ಫಲ. ಆದಕಾರಣ ಅದನ್ನು ನಿಮ್ಮೊಳಗೇ ಅರಸಿ. ಎಲ್ಲಾ ಶಾಸ್ತ್ರಗಳಿಂದ, ಆಕಾರಗಳಿಂದ ಪಾರಾಗಿ ನಿಮ್ಮ ಆತ್ಮವನ್ನು ಮಾತ್ರ ನೋಡಿ. ನಾವು ಗ್ರಂಥಗಳಿಂದ ಭ್ರಾಂತರಾಗುವೆವು, ಹುಚ್ಚರಾಗುವೆವು ಎನ್ನುವನು ಶ್ರೀಕೃಷ್ಣ. ಪ್ರಕೃತಿಯ ದ್ವಂದ್ವದಿಂದ ಪಾರಾಗಿ. ನೀವು, ಬಾಹ್ಯ ಆಚಾರ, ತಂತ್ರಗಳು ಇವೇ ಧರ್ಮ ಎಂದು ಭಾವಿಸಿದರೆ ಬಂಧನದಲ್ಲಿರುವಿರಿ. ಇತರರಿಗೆ ಸಹಾಯಮಾಡಲು ಅವುಗಳಲ್ಲಿ ಭಾಗಿಯಾಗಿ. ಆದರೆ ಜೋಪಾನ, ಅವು ಬಂಧನವಾಗದಂತೆ ನೋಡಿಕೊಳ್ಳಿ. ಧರ್ಮ ಒಂದು, ಆದರೆ ಅದು ಹಲವು ಬಗೆಯಾಗಿ ವ್ಯಾಪಿಸಿದೆ. ಪ್ರತಿಯೊಬ್ಬರೂ ತಮ್ಮ ಬೋಧನೆಯನ್ನು ನೀಡಲಿ, ಆದರೆ ಅನ್ಯಧರ್ಮಗಳಲ್ಲಿ ತಪ್ಪು ಕಂಡು ಹಿಡಿಯಬೇಡಿ. ನಿಮಗೆ ಸತ್ಯ ಬೇಕಾದರೆ ನೀವು ಎಲ್ಲಾ ಆಕಾರಗಳಿಂದಲೂ ಪಾರಾಗಬೇಕು. ಭಗವಂತನ ಜ್ಞಾನಾಮೃತವನ್ನು ಉನ್ಮತ್ತರಾಗುವವರೆಗೆ ಪಾನ ಮಾಡಿ. ''ಸೋऽಹಂ - ನಾನೇ ಅವನು'' ಎಂಬುದನ್ನು ಅರಿತವನು ಚಿಂದಿಬಟ್ಟೆಯನ್ನು ಹೊದ್ದುಕೊಂಡಿದ್ದರೂ ಸುಖಿ. ಅನಂತ ಶಕ್ತಿಯ ಮೂಲಕ್ಕೆ ಹೋಗಿ. ಅನಂತಶಕ್ತಿಯನ್ನು ಹೊಂದಿ, ಬನ್ನಿ. ಗುಲಾಮನಾದವನು ಸತ್ಯಾನ್ವೇಷಣೆಗೆ ಹೊರಡುವನು; ಮುಕ್ತನಾಗಿ ಹಿಂದಿರುಗುವನು.

*(ಕೃತಿಶ್ರೇಣಿ, ಸಂ.೭, ಪು.೨೬೨)*

# ಶ್ರೀಮಾತೆ

ಮೂಲ ಬಂಗಾಳಿ : **ಆಶುತೋಷ್ ಮಿತ್ರ** ಅನುವಾದ : **ಸ್ವಾಮಿ ಜ್ಞಾನಯೋಗಾನಂದ**

## ಭಾಗ ೩



**ಕೃ**ಷ್ಣಲಾಲ್ ಒಬ್ಬನಿಗೇ ಯೋಗಿನ್ ಮಹಾರಾಜರ ಸೇವೆ ಮಾಡುವುದು ಸಾಧ್ಯವಾಗುತ್ತಿರಲಿಲ್ಲ. ಅವನ ಸಹಾಯಕ್ಕಾಗಿ ಬೇಲೂರು ಮಠದಿಂದ ನಾನು ಬಂದೆ. ಹಗಲು ಹೊತ್ತು ಕೃಷ್ಣಲಾಲ್ ಮತ್ತು ನಾನು, ಹಾಗೂ ರಾತ್ರಿ ಹೊತ್ತು ಶಾರದಾ ಮಹಾರಾಜ್ ಸೇವೆಯಲ್ಲಿ ನಿರತರಾದೆವು. ಶಾರದಾ ಮಹಾರಾಜ್ ಹಗಲು ಕಂಬೂಲಿಯಾತೋಲಾದಲ್ಲಿರುವ ಉದ್ಬೋಧನ ಪ್ರೆಸ್ಸಿನಲ್ಲಿ ಕೆಲಸ ಮಾಡುತ್ತಿದ್ದರು; ರಾತ್ರಿ ಹೊತ್ತು ನಮಗೆ ಬಿಡುವು ಮಾಡಿಕೊಡುವ ಸಲುವಾಗಿ ಯೋಗಿನ್ ಮಹಾರಾಜರ ಸೇವೆಗೆ ನಿಲ್ಲುತ್ತಿದ್ದರು. ಕೃಷ್ಣಲಾಲ್ ಶ್ರೀಮಾತೆಯವರಿಂದ ದೀಕ್ಷೆ ಪಡೆದ ಶಿಷ್ಯನಾಗಿದ್ದರೂ, ಯೋಗಿನ್ ಮಹಾರಾಜ್‌ರೊಂದಿಗೆ ವಿಶೇಷ ಆತ್ಮೀಯತೆ ಹೊಂದಿದ್ದ. ಅವರ ಮಲಮೂತ್ರ ಇತ್ಯಾದಿಗಳನ್ನು ಸ್ವಚ್ಛಗೊಳಿಸುವ ಕೆಲಸವನ್ನು ಬೇರೆ ಯಾರಿಗೂ ಕೊಡದೆ ತಾನೇ ಮಾಡುತ್ತಿದ್ದ. ನಾನು ಪಥ್ಯದ ಆಹಾರ ತಯಾರು ಮಾಡುವುದು, ರೋಗಿಗೆ ಸಮಯಕ್ಕೆ ಸರಿಯಾಗಿ ಔಷಧ ಹಾಗೂ ಪಥ್ಯ ನೀಡುವುದು, ಹಾಗೂ ಇತರ ಸಾಮಾನ್ಯ ಸೇವಾಕಾರ್ಯಗಳನ್ನೆಲ್ಲ ಮಾಡುವುದರಲ್ಲಿ ನಿರತನಾದೆ. ಕೆಲಸ ಮುಗಿದು ಬಿಡುವು ಸಿಕ್ಕಿದಾಗಲೆಲ್ಲ ನಾನು ಮೇಲಂತಸ್ತಿನಲ್ಲಿದ್ದ ಶ್ರೀಮಾತೆಯವರ ಬಳಿಗೆ ಹೋಗಿ, ರೋಗಿಯ ಅವಸ್ಥೆಯನ್ನು ಕುರಿತಾಗಿ ಅವರಿಗೆ ತಿಳಿಸುತ್ತಿದ್ದೆ. ಅವರು ಅತ್ಯಂತ ಕಾಳಜಿಯಿಂದ ಅದನ್ನು ಕೇಳುತ್ತಿದ್ದರು. ಅದಲ್ಲದೆ ಅವರು ನನ್ನೊಂದಿಗೆ ಇನ್ನೂ ಏನೇನೋ ಮಾತುಕತೆಯಾಡುತ್ತಿದ್ದರು. ಹೊರಟು ಬರುವಾಗ ಏನಾದರೂ ತಿನ್ನಲು ಕೊಡುತ್ತಿದ್ದರು.

ಆಗ ಶ್ರೀಮಾತೆಯವರ ಬಳಿಗೆ ಸ್ತ್ರೀ ಅಥವಾ ಪುರುಷ ಭಕ್ತರು ಬರುತ್ತಿದ್ದುದು ತುಂಬ ಕಡಿಮೆ. ಶ್ರೀಮಾತೆಯವರ ಕುಟುಂಬದ ವರಮಾನವೂ ಬಹಳ ಕಡಿಮೆಯಾಗಿತ್ತು; ಹೇಗೋ ಖರ್ಚು ವೆಚ್ಚ ನಿರ್ವಹಣೆಯಾಗುತ್ತಿತ್ತು. ಒಂದು ದಿನ ಮೇಲಂತಸ್ತಿಗೆ ನಾನು ಹೋದಾಗ ಅಲ್ಲಿ ಒಬ್ಬಾಕೆ ಭಕ್ತೆ ಕುಳಿತಿದ್ದಳು. ನನ್ನನ್ನು ನೋಡಿದ ಕೂಡಲೇ ಆಕೆ ಶ್ರೀಮಾತೆಯವರನ್ನು ಕೇಳಿದಳು, ''ಇವರು ನಮ್ಮ ಮಹಾರಾಜರ ತಮ್ಮನೆ?'' ಅದಕ್ಕೆ ಶ್ರೀಮಾತೆ, ''ಹೌದು'' ಎಂದು ಹೇಳಿ, ನನಗೆ ಅವರ ಪರಿಚಯ ಮಾಡಿಕೊಟ್ಟರು. ಅವರೆಂದರು, ''ಇವಳು ಮೇನಿಯ ತಾಯಿ.[೧] ಒಳ್ಳೆಯ ಭಕ್ತಿಯುಳ್ಳವಳು.'' ಮುಂದೆ ಕೆಲವು ದಿನ ನಾನು ಮೇನಿಯ ತಾಯಿಯ ಮನೆಯಲ್ಲಿ ಊಟ ಮಾಡಿದೆ.

ಯೋಗಿನ್ ಮಹಾರಾಜರ ಅನಾರೋಗ್ಯ ಕ್ರಮೇಣ ಹೆಚ್ಚುತ್ತ ಹೋಯಿತು; ಮಾತನಾಡುವುದಕ್ಕೂ ಅವರಿಗೆ ಚೈತನ್ಯ ಸಾಲದೆ ಹೋಯಿತು. ಅವರು ಅತ್ಯಂತ ಕ್ಷೀಣವಾದ ಧ್ವನಿಯಿಂದ ಮಾತನಾಡುತ್ತಿದ್ದರು. ಎಲ್ಲರಿಗೂ ತುಂಬ ಕಳವಳವುಂಟಾಯಿತು. ವಿಶೇಷವಾಗಿ, ಶ್ರೀಮಾತೆ ಅವರಿಗಾಗಿ ಅತ್ಯಂತ ಚಿಂತಿಸತೊಡಗಿದ್ದರು. ಬೇಲೂರು ಮಠದಿಂದ ಗುರುಭಾಯಿಗಳು ಬಂದು ಯೋಗಿನ್ ಮಹಾರಾಜರನ್ನು ನೋಡಿ ಹೋಗಲಾರಂಭಿಸಿದರು. ಒಂದು ದಿನ ಅವರ ತಂದೆ ನವೀನಚಂದ್ರ ಚೌಧುರಿಯವರೂ ಬಂದು ನೋಡಿ ಹೋದರು. ನಾವು ಪ್ರಾಣವನ್ನೇ ಒತ್ತೆಯಿಟ್ಟು ಅವರ ಸೇವೆ ಮಾಡುತ್ತಿದ್ದೆವು.

ಈ ಸಂದರ್ಭದಲ್ಲೇ ಒಂದು ದಿನ ನಾನು ಎಂದಿನಂತೆ ಬೆಳಿಗ್ಗೆ ಶ್ರೀಮಾತೆಯವರ ಪೂಜೆಗಾಗಿ ತೋಟದ ಮಾಲಿ ತಂದುಕೊಟ್ಟ ಹೂಗಳನ್ನು ತೆಗೆದುಕೊಂಡು ಹೋಗಿದ್ದೆ. ಅಲ್ಲಿ ನೋಡಿದಾಗ ಶ್ರೀಮಾತೆಯವರು ತಮ್ಮ ಕೋಣೆಯಲ್ಲಿ ಪಶ್ಚಿಮ ದಿಕ್ಕಿಗೆ ತಿರುಗಿ ಕಾಲುನೀಡಿ ಸುಮ್ಮನೆ ಕುಳಿತಿದ್ದರು. ಅವರ ಕೆನ್ನೆಗಳಿಂದ ಕಣ್ಣೀರು ಕೆಳಗಿಳಿಯುತ್ತಿತ್ತು. ಈ ರೀತಿ ಅವರನ್ನು ಕಂಡಾಗ ನನಗನ್ನಿಸಿತು, ರೋಗಿಗೋಸ್ಕರ ಅವರು ಅಳುತ್ತಿದ್ದಾರೆ ಎಂದು. ಆಗ ನನ್ನ

೧. ಆಕೆ ರಾಜಬಾಲಾ ಘೋಷ್. ಅವಳು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದಿದ್ದಳು. ಅವಳ ಮಗ ನರೇಶಚಂದ್ರ ಘೋಷ್ ಕೂಡ ಶ್ರೀಮಾತೆಯವರ ಶಿಷ್ಯ. ಅವನ ಅಕ್ಕನ ಹೆಸರು ಮೇನಿ.

ಅಲ್ಪಮತಿಗೆ ಏನು ಹೊಳೆಯಿತೋ, ಅದನ್ನೇ ಹೇಳಿ ಅವರನ್ನು ಸಮಾಧಾನ ಮಾಡಲೆತ್ನಿಸಿದೆ. ಅದನ್ನು ಅವರು ಕೇಳಿಸಿಕೊಂಡರೋ ಇಲ್ಲವೋ ಗೊತ್ತಿಲ್ಲ. ಸ್ವಲ್ಪ ಹೊತ್ತಿನ ನಂತರ ಅವರು ತಲ್ಲಣ ಗೊಂಡು, ''ನನ್ನ ಮಗು ಯೋಗಿನ್‌ಗೆ ಏನಾಗುವುದು, ಮಗೂ?'' ಎಂದರು. ಅದಕ್ಕೆ ನಾನೆಂದೆ, ''ಯಾಕೆ ಚಿಂತಿಸುತ್ತೀರಿ, ಅಮ್ಮಾ? ಅವರಿಗೆ ವಾಸಿಯಾಗುವುದು.'' ಅದಕ್ಕೆ ಅವರು, ''ನಾನೇನು ನೋಡುತ್ತಿದ್ದೇನೆ ಗೊತ್ತೇ ಮಗೂ?'' ''ಏನು ನೋಡುತ್ತಿದ್ದೀರಿ?'' ಅವರೆಂದರು, ''ಬೆಳಿಗ್ಗೆ ಹೊತ್ತಿನಲ್ಲಿ ನೋಡಿದೆ, ಠಾಕೂರರು ಅವನನ್ನು ಕರೆದುಕೊಂಡು ಹೋಗಲು ಬಂದಿದ್ದರು'' – ಹೀಗೆನ್ನುತ್ತ ಅವರು ಅಳತೊಡಗಿದರು. ಅವರು ಅಳುವುದನ್ನು ನೋಡಿ ನನ್ನ ಕಣ್ಣುಗಳಲ್ಲೂ ನೀರು ಉಕ್ಕಿ ಬಂತು. ಮರುಕ್ಷಣವೇ ಅವರು ಖಚಿತವಾಗಿ ಹೇಳಿದರು, ''ಯಾರಿಗೂ ಹೇಳಬೇಡ, ಇದನ್ನು ಯಾರಿಗೂ ಹೇಳಕೂಡದು.'' ನಾನೆಂದೆ, ''ಆಗಲಮ್ಮಾ, ನಾನು ಯಾರಿಗೂ ಹೇಳಲಾರೆ.'' ಅವರಿಗೆ ಮಾತು ಕೊಟ್ಟೆ ನಿಜ, ಕೊಟ್ಟ ಮಾತಿನ ಪ್ರಕಾರ ಇಲ್ಲಿಯವರೆಗೂ ಇದನ್ನು ಯಾರಿಗೂ ಹೇಳಿಲ್ಲ, ನಿಜ. ಆದರೆ ಇಂದೇಕೋ ಗೊತ್ತಿಲ್ಲ, ನನ್ನ ಲೇಖನಿಯ ಮೂಲಕ ಇದು ಹೊರಬಂತು. ಅವರು ಮತ್ತೆ ಹೇಳತೊಡಗಿದರು. ''ಯೋಗಿನ್ ನನ್ನ ಮಗನೇ; ಹೇಗೆ ಶಾರದಾ ನನ್ನ ಮಗನೋ, ಅದೇ ರೀತಿ'' ಇತ್ಯಾದಿ.[೨]

ಹಲವು ಬಗೆಯಲ್ಲಿ ಸಾಂತ್ವನ ಹೇಳಿದ ನಂತರ ಶ್ರೀಮಾತೆ ಪೂಜೆ ಮಾಡಲು ಕುಳಿತುದನ್ನು ನೋಡಿ, ನಾನು ಕೆಳಗಿಳಿದು ಬಂದೆ. ನಾನು ಬಂದಾಗ ರೋಗಿಯ ಅವಸ್ಥೆ ಅತ್ಯಂತ ಶೋಚನೀಯವಾಗಿತ್ತು. ಶಾರದಾ ಮಹಾರಾಜ್ ಅಂದು 'ಉದ್ಬೋಧನ'ದ ಕೆಲಸಕ್ಕೆ ಹೋಗಲಿಲ್ಲ. ಡಾಕ್ಟರ್ ಶಶಿಭೂಷಣ ಘೋಷ್ ಶಾರದಾ ಮಹಾರಾಜರನ್ನು ಪ್ರತ್ಯೇಕ ಕರೆದು, ಅವರ ಬಳಿ ಏನೋ ಹೇಳಿದರು. ಮಧ್ಯಾಹ್ನದ ವೇಳೆಗೆ ರೋಗಿಯ ಅವಸ್ಥೆ ಇನ್ನಷ್ಟು ಹದಗೆಟ್ಟು ಹೋಯಿತು.

ಆಗ ಸರಿಸುಮಾರು ಚೈತ್ರಮಾಸದ ಮಧ್ಯಭಾಗ.[೩] ಮಧ್ಯಾಹ್ನದ ಹೊತ್ತಿಗೆ ನೋಡುವಾಗ, ರೋಗಿ ನಿಜಕ್ಕೂ ನಮ್ಮನ್ನು ಬಿಟ್ಟು ಹೋಗುವರೆಂಬುದು ಖಾತ್ರಿಯಾಯಿತು. ಬೇಲೂರು ಮಠಕ್ಕೆ ಸುದ್ದಿ ಕಳುಹಿಸಲಾಯಿತು. ಸೂರ್ಯಾಸ್ತಕ್ಕೆ ಮುನ್ನ ರೋಗಿಯ ಮುಖದಲ್ಲಿ ಒಂದು ಅಪೂರ್ವ ಕಾಂತಿ ತುಂಬಿಕೊಂಡಿತು. ಕೃಷ್ಣಲಾಲ್ ಮಂಚದ ತಲೆಯ ಭಾಗದಲ್ಲಿ ಕುಳಿತಿದ್ದ. ಇದ್ದಕ್ಕಿದ್ದಂತೆ ಅವನು ದನಿಯೆತ್ತಿ ಅಳಲಾರಂಭಿಸಿದ. ಅವನ ಧ್ವನಿಯನ್ನು ಕೇಳಿ, ಮೇಲಂತಸ್ತಿನಲ್ಲಿದ್ದ ಶ್ರೀಮಾತೆ ಜೋರಾಗಿ ಧ್ವನಿಯೆತ್ತಿ ಅಳತೊಡಗಿದರು. ಹಿಂದೆಂದೂ ಅವರು ಈ ರೀತಿ ಅತ್ತದ್ದನ್ನು ಕುರಿತು ನಾನು ಕೇಳಿರಲಿಲ್ಲ. ಇಂದು ಅವರ ರೀತಿಯೆಲ್ಲ ಬದಲಾಗಿದೆ. ಅವರ ಆರ್ತನಾದವನ್ನು ಕೇಳಿ, ನಾನು ಅವರ ಬಳಿಗೆ ಹೋದೆ. ಅವರ ಎರಡೂ ಪಾದಗಳನ್ನು ಹಿಡಿದು, ಅಳಬಾರದೆಂದು ನಾನಾ ಬಗೆಯಲ್ಲಿ ಅನುನಯದಿಂದ ಕೇಳಿಕೊಂಡೆ. ಅದರಿಂದೇನೂ ಉಪಯೋಗವಾಗಲಿಲ್ಲ. ಅವರು ಹೇಳಿದರು, ''ನೀನು ಹೋಗು, ಹೋಗು; ನನ್ನ ಯೋಗಿನ್ ನನ್ನನ್ನು ಬಿಟ್ಟು ಹೋದ!''

ಬೇಲೂರು ಮಠದಿಂದ ಸಾಧುಗಳು ಬಂದರು. ಖೋಕಾ ಮಹಾರಾಜ್(ಸ್ವಾಮಿ ಸುಬೋಧಾನಂದರು) ತಮ್ಮ ಕೈಯಿಂದಲೇ ಮಹಾರಾಜರ ದೇಹಕ್ಕೆ ವಿಭೂತಿ ಲೇಪಿಸಿ, ಪೂಜೆ ಮಾಡಿ ಆರತಿ ಬೆಳಗಿದರು. ಕ್ರಮೇಣ ಈಗತಾನೇ ಆರಂಭಗೊಂಡಿದ್ದ ಶ್ರೀರಾಮಕೃಷ್ಣ ಮಿಷನ್ನಿನ ಕೆಲವು ಮಂದಿ ಸದಸ್ಯರು ಬಂದು ಸೇರಿದರು.[೪] ಕಳೇಬರವನ್ನು ಹೂ, ಗಂಧ ಹಾಗೂ ಮಾಲೆಗಳಿಂದ ಅಲಂಕರಿಸಿ, ಮರದ ಮಂಚದ ಮೇಲೆ ತಂದಿಟ್ಟರು. ಶಾರದಾ ಮಹಾರಾಜರನ್ನು 'ಉದ್ಬೋಧನ' ದಲ್ಲಿರಲು ಹೇಳಿ, ಉಳಿದವರೆಲ್ಲ ಶವದೊಂದಿಗೆ ಮೆರವಣಿಗೆ ಹೋದರು.

ರಾತ್ರಿ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಸ್ವಾಮಿ ಯೋಗಾನಂದರ ಕಳೇಬರವನ್ನು ಮೆರವಣಿಗೆಯ ಮೂಲಕ ಕಾಶೀ ಮಿತ್ರರ ಘಾಟ್‌ಗೆ ಎದುರಾಗಿ, ''ಹರಿಃ ಓಂ ತತ್‌ಸತ್ '' ಎಂಬ ಧ್ವನಿಯೊಂದಿಗೆ, ಕಲ್ಕತ್ತದ ಬಾಗ್‌ಬಜಾರ್ ಬೀದಿಯಿಂದ ಬೇಲೂರು ಮಠದ ಸಂನ್ಯಾಸಿ ವೃಂದದವರು ಹೊತ್ತೊಯ್ಯತೊಡಗಿದರು. ಹಿಂದೆಂದೂ ಕಾಣದ ದೃಶ್ಯ ಅದಾಗಿತ್ತು. ಅಶ್ರುತರ್ಪಣದೊಂದಿಗೆ ಸಾಗುತ್ತಿದ್ದ ಆ ದೃಶ್ಯದಿಂದ ಆಕರ್ಷಿತರಾಗಿ ಬೀದಿಯಲ್ಲಿದ್ದ ಆಬಾಲವೃದ್ಧರೂ, ಮಹಿಳೆಯರೂ ತಮ್ಮ ತಮ್ಮ ಮನೆಗಳಿಂದ ಹೊರಬಂದು ನೋಡತೊಡಗಿದರು. ಇಂಥ ಮಹಾಪುರುಷನತ್ತ ಅಂಜಲಿಬದ್ಧರಾಗಿ ನಿಂತು ತಮ್ಮ ಶ್ರದ್ಧೆಯನ್ನು ಪ್ರಕಟಪಡಿಸಿದರು. ಕಲ್ಕತ್ತದಲ್ಲಿ ಇದು ಹೊಸ ದೃಶ್ಯವಾಗಿತ್ತು.

ಸೂಕ್ತ ಸಮಯದಲ್ಲಿ ಶವವನ್ನು ಚಿತೆಯ ಮೇಲೆ ಸ್ಥಾಪಿಸಿ, ಸಂನ್ಯಾಸಿವೃಂದವು ಅಗ್ನಿಯನ್ನು ಹೊತ್ತಿಸಿ, ಒಂದೇ ಧ್ವನಿಯಿಂದ,

**ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಮ್ ।**
**ಓಂ ಕ್ರತೋ ಸ್ಮರ ಕೃತಂ ಸ್ಮರ, ಕ್ರತೋ ಸ್ಮರ ಕೃತಂ ಸ್ಮರ ॥**

– ಮೊದಲಾದ ವೇದಮಂತ್ರಗಳನ್ನು ಪಠಿಸಿದರು. ಸ್ಮಶಾನ ಭೂಮಿ ಅವುಗಳ ಅನುರಣನೆಯಿಂದ ತುಂಬಿತು. ನೋಡನೋಡುತ್ತಿದ್ದಂತೆ ಆ ಪ್ರದೇಶವೆಲ್ಲ ಚಿತಾಭಸ್ಮದಿಂದ ತುಂಬಿ ಹೋಯಿತು.

---

೨. ಯೋಗಿನ್ ಮಹಾರಾಜ್ ಹಾಗೂ ಶಾರದಾ ಮಹಾರಾಜ್ ಶ್ರೀರಾಮಕೃಷ್ಣರ ಶಿಷ್ಯರಾಗಿದ್ದರೂ, ಅವರು ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದಿದ್ದರು ಎಂದು ಈ ಹಿಂದೆಯೇ ಶ್ರೀಮಾತೆಯವರಿಂದ ಕೇಳಿ ತಿಳಿದಿದ್ದೆ.

೩. ಚೈತ್ರಮಾಸದ ೧೫ ರಂದು (೧೮೯೯ರ ಮಾರ್ಚ್ ೨೮ರಂದು) ಸ್ವಾಮಿ ಯೋಗಾನಂದರು ದೇಹತ್ಯಾಗ ಮಾಡಿದರು.

೪. ಕೆಲವು ದಿನಗಳ ಮುನ್ನ ಸ್ವಾಮಿ ವಿವೇಕಾನಂದರು ಸ್ಥಾಪನೆ ಮಾಡಿದ ಶ್ರೀರಾಮಕೃಷ್ಣ ಮಿಷನ್ ಆರಂಭಗೊಂಡಿತ್ತು. ರಾಮಕಾಂತ ಬಸು ಸ್ಟ್ರೀಟಿನಲ್ಲಿದ್ದ ಬಲರಾಮ ಬಸುವಿನ ಮನೆಯ ಮಹಡಿಯ ವಿಶಾಲವಾದ ಕೋಣೆಯಲ್ಲಿ ಮಿಷನ್ನಿನ ಅಧಿವೇಶನ ಕ್ರಮವಾಗಿ ಆಗಾಗ ನಡೆಯುತ್ತಿತ್ತು. ಯೋಗಿನ್ ಮಹಾರಾಜ್ ಒಂದು ಸಲ ಒಂದು ಅಧಿವೇಶನದಲ್ಲಿ ಒಂದು ಸಣ್ಣ ಭಾಷಣ ಮಾಡಿದ್ದರು. ಉಳಿದ ಭಾಷಣಕಾರರೆಂದರೆ ಗಿರೀಶಚಂದ್ರ ಘೋಷ್, ಡಾಕ್ಟರ್ ಘೋಷ್, ಸ್ವಾಮಿ ತ್ರಿಗುಣಾತೀತಾನಂದ ಇತ್ಯಾದಿ. ಸದಸ್ಯರಲ್ಲಿ ಪ್ರಮುಖರೆಂದರೆ ಶರತ್ ಸರ್ಕಾರ್, ಚುನಿಲಾಲ್ ಬಸು, ಅಸೀಮಕುಮಾರ್ ಬಸು ಹಾಗೂ ಶೈಲೇಂದ್ರ.

ಭಸ್ಮಸ್ತೂಪವು ಪವಿತ್ರ ಭಾಗೀರಥೀ ನದಿಯ ನೀರಿನಲ್ಲಿ ಸಾಗುತ್ತಿದೆ; ಅಷ್ಟರಲ್ಲಿ ನಾಟ್ಯಸಾಮ್ರಾಟ್ ಗಿರೀಶಚಂದ್ರ, ಥಿಯೇಟರಿನಿಂದ ಅಲ್ಲಿಗೆ ಬಂದ. ಅವನು ಎರಡು ಬಿಂದು ಕಣ್ಣೀರು ಸುರಿಸಿ, ಆ ಸಂಸ್ಕಾರದಲ್ಲಿ ಸೇರಿಕೊಂಡ.

ಎಲ್ಲವೂ ಮುಕ್ತಾಯವಾದ ನಂತರ ಖೋಕಾ ಮಹಾರಾಜ್ ಒಂದಿಷ್ಟು ಅಸ್ಥಿಸಂಗ್ರಹ ಮಾಡಿ ತೆಗೆದುಕೊಂಡು ಹೋದರು. ತಾವೇ ಸ್ವತಃ ಅದನ್ನು ಜೋಪಾನವಾಗಿ ಒಯ್ದರು. ಅದನ್ನು ಒಂದು ಪಾತ್ರೆಯಲ್ಲಿ ಸುರಕ್ಷಿತವಾಗಿ ಇಡಲಾಯಿತು. ಅನಂತರ ಯೋಗಿನ್ ಮಹಾರಾಜರ ಒಂದು ತೈಲಚಿತ್ರವನ್ನು ಬರೆಸಿ, ದೇವಾಲಯದ ಹೊರಗಿನ ವರಾಂಡದಲ್ಲಿ ತೂಗಿ ಹಾಕಲಾಯಿತು. ಮರುದಿನ ಶ್ರೀಮಾತೆ ದುಃಖದಿಂದ, ''ಮನೆಯ ಒಂದು ಇಟ್ಟಿಗೆ ಬಿದ್ದುಹೋಯಿತು'' ಎನ್ನುತ್ತಿದ್ದುದನ್ನು ನಾನು ಕೇಳಿದೆ.

ಯೋಗಿನ್ ಮಹಾರಾಜರು ದೇಹಬಿಟ್ಟ ಮೇಲೆ 'ಉದ್ಬೋಧನ'ದಲ್ಲೇ ಕೃಷ್ಣಲಾಲ್ ಇದ್ದುಬಿಟ್ಟ. ಶಾರದಾ ಮಹಾರಾಜ್ ಪ್ರತಿದಿನ ರಾತ್ರಿ ಮತ್ತೆ ಉದ್ಬೋಧನದಲ್ಲೇ ತಂಗಲಾರಂಭಿಸಿದರು.

ಶ್ರೀಮಾತೆಯವರ ತಮ್ಮಂದಿರ ವಿಷಯವಾಗಿ ಒಂದಿಷ್ಟನ್ನು ಇಲ್ಲೇ ಹೇಳುತ್ತೇನೆ. ಅವರು ಪ್ರಧಾನವಾಗಿ ಅರ್ಚಕ ವೃತ್ತಿಯ ಬ್ರಾಹ್ಮಣರು; ವಿಶೇಷವಾಗಿ ಮೊದಲನೆಯ ಹಾಗೂ ಎರಡನೆಯ ತಮ್ಮಂದಿರು. ಈ ಇಬ್ಬರು ತಮ್ಮಂದಿರು ಕಲ್ಕತ್ತೆಯಲ್ಲಿ ಪೂಜೆಯನ್ನು ಹಂಚಿಕೊಂಡು ಮಾಡುತ್ತಿದ್ದರು; ಅಲ್ಲೇ ವಾಸವಾಗಿದ್ದರು. ಅವರು ತಂಗುವುದಕ್ಕಾಗಿ ಚೋರ್‌ಬಾಗಾನ್‌ನಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ಆ ಮನೆಯಲ್ಲೇ ಶ್ರೀಮಾತೆಯವರ ಸಣ್ಣ ತಮ್ಮ ಅಭಯಕುಮಾರ [೫] ಇರುತ್ತಿದ್ದ. ಅವನು ಪ್ರವೇಶಿಕಾ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ, ಕ್ಯಾಂಬೆಲ್‌ನಲ್ಲಿ ವೈದ್ಯಕೀಯ ಶಿಕ್ಷಣ ಪಡೆಯುತ್ತಿದ್ದ.

ಯೋಗಿನ್ ಮಹಾರಾಜರು ದೇಹತ್ಯಾಗ ಮಾಡಿದ ನಂತರ ಅಭಯಕುಮಾರ ಕಾಲೆರಾ ರೋಗಕ್ಕೆ ತುತ್ತಾಗಿ, ಮೃತ್ಯುವನ್ನಪ್ಪಿದ. ಅವನು ಅನಾರೋಗ್ಯದಿಂದಿದ್ದಾಗ ಅವನನ್ನು ನೋಡಲು ಶ್ರೀಮಾತೆ ಪಲ್ಲಕ್ಕಿ ಮಾಡಿಕೊಂಡು ಹೋಗಿದ್ದರು. ಶರತ್ ಮಹಾರಾಜ್ ಹಾಗೂ ಸುಶೀಲ್ ಮಹಾರಾಜ್ ರೋಗಿಯ ಸೇವೆ ಮಾಡುತ್ತಿದ್ದರು. ಶ್ರೀಮಾತೆಯ ಬಾಯಿಯಿಂದಲೇ ನಾನು ಕೇಳಿದ್ದೇನೆ, ''ಅಷ್ಟೊಂದು ಜೋರಾಗಿ ಭೇದಿಯಾಗುತ್ತಿತ್ತು. ಅದು ವಾಸಿಯಾಗಲು ತಾರ್‌ಶಯನಿ, ಶರತ್ ಹಾಗೂ ಸುಶೀಲ್ ಎಷ್ಟು ಸಲ ಕೈಯಿಂದಲೇ ಮಲವನ್ನು ಹಿಡಿಯಬೇಕಾಯಿತು!'' ಈ ತಮ್ಮನನ್ನು ಶ್ರೀಮಾತೆ ತುಂಬಾ ಪ್ರೀತಿಸುತ್ತಿದ್ದರು. ಆದಕಾರಣ ಅವನ ಮರಣದ ನಂತರ ಶ್ರೀಮಾತೆ ಸಾಕಷ್ಟು ದುಃಖಿಸಿದರು. [೬]

ಯೋಗಿನ್ ಮಹಾರಾಜರ ದೇಹತ್ಯಾಗವಾದ ನಂತರ, ಅಂದರೆ ಶ್ರೀಮಾತೆಯವರ ಅಂತರಂಗದ ಶಿಷ್ಯರೊಬ್ಬರ ಮರಣದ ಬಳಿಕ, ಹಾಗೂ ಅದಾದ ಮೇಲೆ (ಸುಮಾರು ನಾಲ್ಕು ತಿಂಗಳ ಬಳಿಕ) ತಮ್ಮ ಅಭಯಕುಮಾರನ ಮರಣದ ಬಳಿಕ ಅವರು ಎಷ್ಟೊಂದು ದುಃಖಕ್ಕೊಳಗಾಗಿದ್ದರು ಅಂದರೆ, ಕಲ್ಕತ್ತೆಯ ಮನೆಯಲ್ಲಿ ಅವರಿಗೆ ತಂಗಲು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ಶಾರದಾ ಮಹಾರಾಜ್ ಅವರನ್ನು ಹುಟ್ಟೂರಾದ ಜಯರಾಮಬಾಟಿಗೆ ಕರೆದುಕೊಂಡು ಹೋದರು.

ಅವರು ವರ್ಧಮಾನದ ಮೂಲಕ ಹೋಗುತ್ತಿದ್ದರು. ದಾರಿ ಮಧ್ಯೆ ನಡೆದ ಘಟನೆಯನ್ನು ಶ್ರೀಮಾತೆಯವರ ಬಾಯಿಯಿಂದಲೇ ಕೇಳಿದ್ದೆ; ಅದನ್ನು ಅವರ ಮಾತಿನಿಂದಲೇ ಇಲ್ಲಿ ನೀಡುತ್ತೇನೆ:

ದಾಮೋದರ ನದಿ ದಾಟಿ, ಪಲ್ಲಕ್ಕಿ ಸಿಗದ ಕಾರಣ ಎತ್ತಿನಗಾಡಿಯಲ್ಲಿ ಶ್ರೀಮಾತೆ ಪ್ರಯಾಣ ಮಾಡುತ್ತಿದ್ದರು. ಶಾರದಾ ಮಹಾರಾಜ್ ಬೆತ್ತವನ್ನು ಹೆಗಲ ಮೇಲಿಟ್ಟುಕೊಂಡು, ಗಾಡಿಗಿಂತ ಮುಂದೆ ಕಾಲುನಡಿಗೆಯಲ್ಲಿ ಹೋಗುತ್ತಿದ್ದರು. ಆಗ ರಾತ್ರಿಹೊತ್ತು; ಸುಮಾರು ನಡುರಾತ್ರಿ ಕಳೆದಿತ್ತು. ಬಹುಶಃ ಮೂರನೆಯ ಪ್ರಹರವಿದ್ದಿರಬೇಕು. ಶ್ರೀಮಾತೆ ನಿದ್ರಿಸುತ್ತಿದ್ದರು. ಇದ್ದಕ್ಕಿದ್ದಂತೆ ರಸ್ತೆಯಲ್ಲಿ ಒಂದೆಡೆ ನೀರಿನ ಪ್ರವಾಹದಿಂದ ಆಳವಾದ ಬಿರುಕು ಉಂಟಾಗಿದ್ದುದನ್ನು ಶಾರದಾ ಮಹಾರಾಜ್ ಗಮನಿಸಿದರು. ಅಲ್ಲಿ ರಸ್ತೆಯ ನಡುವೆ ಎಂತಹ ಅಂತರವುಂಟಾಗಿತ್ತೆಂದರೆ, ಅದರ ಮೂಲಕ ಗಾಡಿ ಸಾಗುವುದು ಸಾಧ್ಯವೇ ಇರಲಿಲ್ಲ. ಗಾಡಿ ಬಿರುಕಿನಲ್ಲಿ ಇಳಿದರೆ, ಅದರ ಚಕ್ರ ಕಳಚಿ ಹೋಗುವ ಸಂಭವವಿತ್ತು. ಅಲ್ಲದೆ, ಅದರ ಅಲುಗಾಟದಿಂದ ಶ್ರೀಮಾತೆಯವರ ನಿದ್ರೆಗೆ ಭಂಗವುಂಟಾಗಬಹುದಿತ್ತು, ಅವರಿಗೆ ಏಟು ಬೀಳುವ ಸಂಭವವೂ ಇತ್ತು. ಆದ್ದರಿಂದ ಗಾಡಿ ಸುಗಮವಾಗಿ ಹೋಗುವಂತೆ, ಶ್ರೀಮಾತೆ



**ಸ್ವಾಮಿ ತ್ರಿಗುಣಾತೀತಾನಂದ (ಶಾರದಾ ಮಹಾರಾಜ್)**

೫. ಅವನ ನಿಜವಾದ ಹೆಸರು ಅಭಯಚರಣ (ನೋಡಿ: 'ಶ್ರೀಮಾ ಸಾರದಾದೇವಿ', ಪು.೧೬) *–ಸಂ*

೬. ಅಭಯಚರಣ ಮೃತ್ಯುವನ್ನಪ್ಪಿದ್ದು ೧೯೦೦ ಆಗಸ್ಟ್ ೨ ರಂದು. ಮರಣಕ್ಕೆ ಕೆಲವು ದಿನಗಳ ಹಿಂದೆಯಷ್ಟೇ ಅವನು ಕ್ಯಾಂಬೆಲ್ ಮೆಡಿಕಲ್ ಸ್ಕೂಲ್‌ನಲ್ಲಿ ಕೊನೆಯ ಪರೀಕ್ಷೆ ಬರೆದಿದ್ದ. *–ಸಂ.*

ಯವರ ನಿದ್ರೆಗೂ ಭಂಗವುಂಟಾಗದಂತೆ ಒಂದು ಉಪಾಯ ಶಾರದಾ ಮಹಾರಾಜರಿಗೆ ಹೊಳೆಯಿತು. ಸ್ವತಃ ತಾವೇ ಬಿರುಕು ಬಿದ್ದ ಪ್ರದೇಶದಲ್ಲಿ ಮಲಗಿಕೊಂಡರು. ಯಾರಿಗೂ ಗೊತ್ತಾಗಲಿಲ್ಲ. ತಮ್ಮ ದಪ್ಪನೆಯ ಶರೀರದ ಮೇಲಿನಿಂದ ಗಾಡಿ ಸಾಗಬಹುದು ಎಂದು ಅವರು ಭಾವಿಸಿದ್ದರು. ಅವರ ಭಾವನೆಯೇನೋ ಉನ್ನತ ಮಟ್ಟದಾಗಿತ್ತು; ಆದರೆ ಅದರಿಂದ ತಾನೇ ಸಾಯಬೇಕಾದೀತು ಎಂಬ ಆಲೋಚನೆ ಅವರಿಗೆ ಬರಲೇ ಇಲ್ಲ. ಅಂತಹ ನಿರ್ಜನ ಪ್ರದೇಶದಲ್ಲಿ, ಅದೂ ಗಾಢಾಂಧಕಾರದಲ್ಲಿ ಅವರಿಲ್ಲದೆ ಹೋದರೆ ಶ್ರೀಮಾತೆಯವರನ್ನು ಯಾರು ನೋಡಿಕೊಳ್ಳುವರು? ಶ್ರೀಮಾತೆ ಯವರ ರಕ್ಷಣೆ ಇತ್ಯಾದಿಗಳ ಹೊಣೆ ಬೇರೆ ಯಾರದು? – ಈ ಭಾರವನ್ನು ಹೊತ್ತುಕೊಂಡೇ ಅವರು ಕಲ್ಕತ್ತೆಯಿಂದ ಬಂದಿದ್ದರು.

ಒಂದು ಮಾತಿದೆ, ಭವಿಷ್ಯವನ್ನು ಯಾರು ಬದಲಾಯಿಸ ಬಲ್ಲರು ಅಂತ. ಇಲ್ಲೂ ಹಾಗೆಯೇ ಆಯಿತು. ಗಾಡಿ ಬಿರುಕಿನ ಸಮೀಪ ಬರುವಷ್ಟರಲ್ಲೇ ಶ್ರೀಮಾತೆಯವರು ಆಕಸ್ಮಿಕವಾಗಿ ನಿದ್ರೆ ಬಿಟ್ಟೆದ್ದು, ಬೆಳದಿಂಗಳಿನಲ್ಲಿ ಹೊರಗೆ ನೋಡಿದಾಗ, ಅಲ್ಲಿ ನಡೆಯು ತ್ತಿದ್ದುದೆಲ್ಲವೂ ಅವರಿಗೆ ತಿಳಿದುಹೋಯಿತು. ಶ್ರೀಮಾತೆ ಜೋರಾಗಿ ಕಿರುಚಿ, ಗಾಡಿ ನಿಲ್ಲಿಸಲು ಹೇಳಿದರು. ಅವರು ತಾವೇ ಗಾಡಿ ಯಿಂದ ಇಳಿದು, ಶಾರದಾ ಮಹಾರಾಜರನ್ನು ಅವರು ಮಾಡಿದ ಕೆಲಸಕ್ಕಾಗಿ ಇನ್ನಿಲ್ಲದಂತೆ ಬೈದುಬಿಟ್ಟರು; ನಡಿಗೆಯ ಮೂಲಕ ಬಿರುಕು ಬಿದ್ದ ಸ್ಥಳವನ್ನು ದಾಟಿದರು. ಖಾಲಿ ಗಾಡಿ ಆ ಬಿರುಕಿನ ಮೂಲಕ ಸುಲಭವಾಗಿ ದಾಟಿತು. ಶಾರದಾ ಮಹಾರಾಜ್ ಗಾಡಿ ದಾಟಿಸಲು ಕೈ ಜೋಡಿಸಬೇಕಾಯಿತು. ಮುಂದೆ ಶ್ರೀಮಾತೆ ಶಾರದಾ ಮಹಾರಾಜ್‌ರ ನಿಷ್ಠೆ ಹಾಗೂ ಗುರುಭಕ್ತಿಯ ವಿಷಯ ವಾಗಿ ಹೇಳುತ್ತ ಈ ಕಥೆಯನ್ನು ನಮ್ಮ ಮುಂದೆ ಹೇಳಿದರು.

ಶ್ರೀಮಾತೆ ಜಯರಾಂಬಾಟಿಯಲ್ಲಿ ವಾಸಮಾಡುತ್ತಿದ್ದಾಗ ಒಂದು ಸಲ ಅಲ್ಲಿಗೆ ಹೋಗಿದ್ದೆವು. ಆಗ ಶಾರದಾ ಮಹಾರಾಜರ ಬಳಿಗೆ ಹೋಗಿ ಈ ವಿಷಯವನ್ನು ಕೇಳಿದಾಗ ಅವರು ನಮಗೆ ಪ್ರೋತ್ಸಾಹ ನೀಡಿ ತಾವೇ ಗೋಧಿಹಿಟ್ಟು, ಮೈದಾ, ಸಕ್ಕರೆ, ಕಲ್ಲು ಸಕ್ಕರೆ, ಕೊಬ್ಬರಿ ಎಣ್ಣೆ, ಮಾವಿನ ಹಣ್ಣು, ಸಿಹಿತಿಂಡಿ ಮುಂತಾದ ವಸ್ತುಗಳನ್ನೆಲ್ಲ ಖರೀದಿಸಿ, ಒಂದು ದೊಡ್ಡ ಗೋಣಿಚೀಲದಲ್ಲಿ ಕಟ್ಟಿ ಕೊಟ್ಟರು. ವರ್ಧಮಾನದ ಮೂಲಕ ಹೋಗುವಾಗ ಸಿಗುವ ಚಟಿ (ಹೋಟೆಲು)ಗಳ ಹೆಸರು, ಅವು ದೂರವಿರುವುದರಿಂದ ನಿಧಾನ ವಾಗಿ ಸಾಗಬೇಕು; ಎಲ್ಲಿ ಊಟ ಮಾಡಬೇಕು, ಏನು ಸಿಗುತ್ತದೆ ಇತ್ಯಾದಿ ಎಲ್ಲವನ್ನೂ ಒಂದು ಕಾಗದದಲ್ಲಿ ಬರೆದುಕೊಟ್ಟರು. ನನ್ನೊಂದಿಗೆ ನನ್ನ ಸ್ನೇಹಿತನೂ ಪ್ರಸಿದ್ಧ ವಿದ್ವಾಂಸನೂ ಆದ ಪಂಡಿತ ಮೋಕ್ಷನಾಥ ಸಮಾಧ್ಯಾಯಿ ಕೂಡ ಇದ್ದ.

ವರ್ಧಮಾನದಲ್ಲಿ ನನ್ನ ಸ್ನೇಹಿತನ ಆತ್ಮೀಯನೊಬ್ಬ ರಾಜ್ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದ. ಮೊದಲಿನ ದಿನ ರಾತ್ರಿಯನ್ನು ಅವನ ಮನೆಯಲ್ಲಿ ನಾವು ಕಳೆದೆವು. ಮರುದಿನ ಬೆಳಿಗ್ಗೆ ದಾಮೋ ದರ ನದಿ ದಾಟಿ, ಶ್ರೀರಾಮಕೃಷ್ಣರ ಜನ್ಮಸ್ಥಳವಾದ ಕಾಮಾರ ಪುಕುರದವರೆಗೆ ಒಂದು ಎತ್ತಿನಗಾಡಿಯನ್ನು ಬಾಡಿಗೆಗೆ ತೆಗೆದು ಕೊಂಡೆವು. ಮಧ್ಯಾಹ್ನ ಉಚಾಲನ್ ಎಂಬ ಚಟಿಯಲ್ಲಿ ಅಧ್ಯಾಪಕ ಸ್ನೇಹಿತ ಕಟ್ಟಿಕೊಟ್ಟಿದ್ದ ಆಹಾರ ಸೇವಿಸಿ, ಎರಡನೇ ಪ್ರಹರದ ಊಟ ಮುಗಿಸಿದೆವು. ಅಂದು ರಾತ್ರಿ ದ್ವಾರಕೇಶ್ವರ ತೀರದಲ್ಲಿದ್ದ ಏಕ್‌ಲಖೀ ಎಂಬ ಚಟಿಯಲ್ಲಿ ನಾವು ತಂಗಿದೆವು. ಮರುದಿನ ಮಧ್ಯಾಹ್ನಕ್ಕೆ ಮೊದಲೇ ನಾವು ಕಾಮಾರಪುಕುರ ತಲುಪಿದೆವು.

ಕಾಮಾರಪುಕುರದಲ್ಲಿ ನಾನು ಶ್ರೀರಾಮಕೃಷ್ಣರಿದ್ದ ಮನೆ ಯಲ್ಲೇ ತಂಗಿದೆ. ಆಗ ಅಲ್ಲಿ ಶ್ರೀರಾಮಕೃಷ್ಣರ ಅಣ್ಣನ ಮಗ ಶಿವ ರಾಮ ಇದ್ದ. ಅವನ ಸಹಾಯದಿಂದ ನಾನು ಶ್ರೀರಾಮಕೃಷ್ಣರ ಬಾಲ್ಯಲೀಲೆಗಳು ನಡೆದ ಸ್ಥಳಗಳನ್ನೆಲ್ಲ ನೋಡಿದೆ. ರಘುವೀರನ ಮಂದಿರ, ಹಾಲದಾರಪುಕುರ, ಭೂತಿರಖಾಲ್, ಶಿವಮಂದಿರ ಇವನ್ನೆಲ್ಲ ನೋಡಿದೆ. ಅಂದು ಅಲ್ಲಿ ಸಂತೆ ಇತ್ತು. ಸಂತೆಯಿಂದ ಜಯರಾಮಬಾಟಿಗಾಗಿ ವಸ್ತುಗಳನ್ನು ಖರೀದಿಸಿ, ಒಂದು ಹೊರೆ ಯನ್ನು ತಲೆಯ ಮೇಲೆ ಹೊತ್ತುಕೊಂಡು, ಸಂಜೆ ಜಯರಾಮ ಬಾಟಿಗೆ ಮರಳಿದೆವು. ದಾರಿಯಲ್ಲಿ ಆಮೋದರ ನದಿ ದಾಟಿ, ಹಳದಿ ಹಾಗೂ ಪುಕುರ ಎಂಬ ಹಳ್ಳಿಗಳನ್ನು ಹಾದು, ಕತ್ತಲಾಗುವ ಮೊದಲೇ ಶ್ರೀಮಾತೆಯವರ ಬಳಿಗೆ ಬಂದು ತಲುಪಿದೆವು. ಧೂಳು ಮೆತ್ತಿಕೊಂಡ ಕಾಲಿನೊಂದಿಗೆ ನಾನು ಅವರಿಗೆ ಪ್ರಣಾಮ ಮಾಡಿದೆ. ನಮ್ಮನ್ನು ನೋಡಿ ಶ್ರೀಮಾತೆಗೆ ತುಂಬಾ ಆನಂದ ವಾಯಿತು. ನಮಗೆ ತಂಗಲು ವ್ಯವಸ್ಥೆ ಮಾಡಿ, ಅವಸರವಾಗಿ ಕುಡಿಯಲು ನೀರುಕೊಟ್ಟು, ತರಕಾರಿ ಹೆಚ್ಚಲು ಕುಳಿತರು. ಊಟಕ್ಕೆ ಪೂರಿ, ಕಡಲೆಬೇಳೆ ದಾಲ್, ಆಲೂಗಡ್ಡೆ ಪಲ್ಯ, ಕುಂಬಳಕಾಯಿ ಪದಾರ್ಥ, ಹಾಲು ಇತ್ಯಾದಿಗಳಿದ್ದವು. ಶ್ರೀಮಾತೆ ಬಳಿಯಲ್ಲಿ ಕುಳಿತು ನಮಗೆ ಊಟ ಮಾಡಿಸಿದರು. ಸ್ವತಃ ತಾವೇ ಬಡಿಸಿದರು ಕೂಡ. ಶ್ರೀಮಾತೆ ಸ್ವತಃ ಕೈಯಿಂದ ಮಾಡಿದ ಅಡುಗೆಯನ್ನು ನಾನು ಊಟ ಮಾಡಿದುದು ಇದೇ ಮೊದಲು. ಅದು ಕಲ್ಕತ್ತಾದ ಅಡುಗೆಯಂತೆಯೇ ಎಂದು ನನಗನ್ನಿಸಿತು. ಹಾಗನ್ನಿಸಿತೆನೋ ನಿಜ; ಆದರೆ ದುಃಖವಾಯಿತು – ಶ್ರೀಮಾತೆಯವರು ನಮಗೋ ಸ್ಕರ ಇಷ್ಟೊಂದು ಕಷ್ಟಪಡಬೇಕಾಯಿತಲ್ಲಾ ಎಂದು. ಆದ್ದರಿಂದ ಊಟ ಮಾಡುತ್ತ ಅವರೊಂದಿಗೆ ಮಾತನಾಡಿದೆ: ''ನಮಗೋಸ್ಕರ ನೀವು ಇಷ್ಟೊಂದು ಶ್ರಮಪಟ್ಟಿರಿ, ಕಾತರಗೊಂಡಿರಿ. ನೀವು ಹೀಗೆ ಮಾಡಬೇಡಿ ಅಂತ ನಮ್ಮಾಸೆ. ಅನ್ನವಷ್ಟೇ ಊಟಮಾಡಿ ನಮಗೆ ಅಭ್ಯಾಸವಿದೆ; ಎಲ್ಲರ ಹಾಗೆ ನಾವೂ ಊಟ ಮಾಡುತ್ತೇವೆ.'' ಅದಕ್ಕೆ ಅವರೆಂದರು, ''ತನ್ನ ಮಕ್ಕಳಿಗೋಸ್ಕರ ತಾಯಿ ಮಾಡ ದಿದ್ದರೆ ಇನ್ನು ಯಾರು ಮಾಡುತ್ತಾರಂತೆ?'' ಹೀಗೆ ಅವರು ಏನೇನೋ ಹೇಳತೊಡಗಿದರು. ಆದರೆ ನಾವು ಚಿಂತೆ ಮಾಡು ತ್ತಿದ್ದುದನ್ನು ಕಂಡು ಅವರು ಸುಮ್ಮನಾದರು. ಮಾರನೇ ದಿನದಿಂದ ನಾವು ಅತ್ತೆಯಂದಿರ ಅಡುಗೆಯನ್ನು ಊಟ ಮಾಡತೊಡಗಿದೆವು.

ಇದೇ ರೀತಿ ಇನ್ನೊಂದು ಬಾರಿ ಶ್ರೀಮಾತೆಯವರೊಂದಿಗೆ ವಾದ ಮಾಡಿದ್ದೆ. ಆಗ ಕಾಳೀಕೃಷ್ಣ ಮಹಾರಾಜ್ (ಸ್ವಾಮಿ ವಿರಜಾ ನಂದರು) ಜೊತೆಗೆ ಇದ್ದರು. ಅಂದೂ ಕೂಡ ರಾತ್ರಿ, ಶ್ರೀಮಾತೆ ತಮ್ಮ ಕೈಯಿಂದಲೇ ಅಡುಗೆ ಮಾಡಿ, ಪೂರಿ ಇತ್ಯಾದಿ ನಮಗೆ ತಿನ್ನಿಸಿದರು.

*(ಮುಂದುವರಿಯುವುದು)*

# ಭಗವದ್ಗೀತೆಯ ಕೃಪೆ

ಹಿಂದೀಮೂಲ: **ಸುದರ್ಶನ ಸಿಂಹ ಚಕ್ರ** ಅನುವಾದ: **ಮಾತಾ ತ್ಯಾಗಮಯೀ**

ಶ್ರೀಕೃಷ್ಣ ಪರಮಾತ್ಮನ ದಿವ್ಯಬೋಧನೆಗಳ ಸಂಕಲನವಾದ, ಭಾರತೀಯರ ಆಧ್ಯಾತ್ಮಿಕ, ನೈತಿಕ ಹಾಗೂ ಧಾರ್ಮಿಕ ಗ್ರಂಥವಾದ ಶ್ರೀಮದ್ಭಗವದ್ಗೀತೆಯು ಅನಾದಿ ಕಾಲದಿಂದಲೂ ಹಲವರ ಮನೆ-ಮನಗಳನ್ನು ಬೆಳಗಿದೆ. ಭಕ್ತರ ಜೀವನದಲ್ಲಿ ಹಲವು ಬಗೆಯ ಪರಿವರ್ತನೆಗಳನ್ನು ಮಾಡಬಲ್ಲ ಈ ಗ್ರಂಥವನ್ನು ಕುರಿತು 'ಕಲ್ಯಾಣ ಕಲ್ಪತರು' ಮಾಸಪತ್ರಿಕೆಯಲ್ಲಿ ಪ್ರಕಟವಾದ ಲೇಖನದ ಅನುವಾದವಿದು. ಅನುವಾದಕರು ಚಳ್ಳಕೆರೆ ಶ್ರೀಶಾರದಾಶ್ರಮದ ಮುಖ್ಯಸ್ಥರಾಗಿದ್ದು, ಹಲವು ಉತ್ತಮ ಗ್ರಂಥಗಳನ್ನು ರಚಿಸಿದ್ದಾರೆ.



**ಸ್ವಾಧ್ಯಾಯಾದಿಷ್ಟದೇವತಾ ಸಂಪ್ರಯೋಗಃ**

*(ಪಾತಂಜಲ ಯೋಗದರ್ಶನ, ೨.೪೪)*

ಸ್ವಾಧ್ಯಾಯದಿಂದ ಇಷ್ಟದೇವತೆಯ ಸಾಕ್ಷಾತ್ಕಾರವಾಗುತ್ತದೆ. ಸ್ವಾಧ್ಯಾಯ ಎಂದರೆ ಮಂತ್ರಜಪ. ಸ್ವಾಧ್ಯಾಯ ಎಂದರೆ ಸ್ವ+ಅಧ್ಯಾಯ, ತನ್ನ+ಅಧ್ಯಯನ, ತನ್ನ ಗ್ರಂಥದ ಅಧ್ಯಯನ, ತನ್ನ ಜೀವನದಲ್ಲಿ ತನ್ನ ಜೀವನದ ಒಂದು ಅಂಗವೇ ಆದ ಗ್ರಂಥದ ಅಧ್ಯಯನ.

ಒಂದು ಗ್ರಂಥವನ್ನು ಅಧ್ಯಯನ ಮಾಡುತ್ತ ಆತ್ಮಶಕ್ತಿ ಜಾಗೃತವಾಗುತ್ತದೆ. ಸ್ನಾನ ಮಾಡುವುದರಿಂದ ಶರೀರ ಸ್ವಚ್ಛವಾಗಿ ಉತ್ಸಾಹ ವರ್ಧನೆಯಾಗುತ್ತದೆ. ಹಾಗೆ ಸದ್ಗ್ರಂಥಗಳ ಅಧ್ಯಯನವು ಮಾನಸಿಕ ಸ್ನಾನ. ಅದರಿಂದ ಅಂತಃಕರಣ ಶುದ್ಧಿಯಾಗುತ್ತದೆ, ಸಾಧನೆಯನ್ನು ಮಾಡಲು ಮನಶ್ಶಕ್ತಿ ವರ್ಧಿಸುತ್ತದೆ, ಪ್ರಚೋದನೆ ಸಿಗುತ್ತದೆ.

ನೀವು ಭಗವದ್ಗೀತೆ, ಭಾಗವತ ಅಥವಾ ಇನ್ನಾವುದೇ ಗ್ರಂಥದ ನಿಮಗೆ ಅತ್ಯಂತ ಸಾಮಾನ್ಯವೆನಿಸುವ ಯಾವುದೇ ಒಂದು ಶ್ಲೋಕವನ್ನು ಬಾಯಿಪಾಠ ಮಾಡಿರಿ. ಅದನ್ನು ಮನಸ್ಸಿನಲ್ಲಿ ಮತ್ತೆ ಮತ್ತೆ ಹೇಳಿಕೊಳ್ಳುತ್ತಿರಿ. ನಾಲ್ಕು ದಿನ ಅದನ್ನೇ ಮುಂದುವರೆಸಿರಿ. ಆಗ ನಿಮಗೆ ಅತ್ಯಂತ ಆಶ್ಚರ್ಯವಾಗುವಂತೆ ಅದರ ವಿಶೇಷ ಅರ್ಥ ಮನೋಗೋಚರವಾಗುತ್ತದೆ. ಆ ಶ್ಲೋಕವನ್ನು ಮತ್ತೆ ಮತ್ತೆ ಹೇಳಿದ್ದರಿಂದ ಅದರ ರಹಸ್ಯ ನಿಮ್ಮ ಮುಂದೆ ತೆರೆದುಕೊಂಡಿತು. ಅದೇ ರೀತಿ ಅಂತಃಕರಣದಲ್ಲಿರುವ ಭಗವತ್ ತತ್ತ್ವವನ್ನು ಮುಚ್ಚಿದ ಪರದೆಯೂ ಅನವರತ ಸ್ವಾಧ್ಯಾಯದಿಂದ ಹರಿದು ಹೋಗಿ ಭಗವಂತ ಗೋಚರಿಸುತ್ತಾನೆ, ದರ್ಶನವೀಯುತ್ತಾನೆ.

ಹಾಗೆಂದು ಸ್ವಾಧ್ಯಾಯ ಸುಲಭವಲ್ಲ. ಸ್ವಾಧ್ಯಾಯದ ಸಂಕಲ್ಪ ಕೂಡ ಅದ್ಭುತ ಕೆಲಸವನ್ನು ಮಾಡುತ್ತದೆ ಎಂಬುದನ್ನು ನಾನು ಕಣ್ಣಾರೆ ಕಂಡಿದ್ದೇನೆ.

ವಾರಣಾಸಿ ಜಿಲ್ಲೆಯಲ್ಲಿರುವ ಒಂದು ಹಳ್ಳಿ ಮಹುಅರ್. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನನ್ನೊಡನೆ ಆ ಹಳ್ಳಿಯ ಒಬ್ಬ ಕ್ಷತ್ರಿಯ ಯುವಕ ಸತ್ಯಾಗ್ರಹ ಚಳುವಳಿಯಲ್ಲಿ ಭಾಗವಹಿಸಿದ್ದನು. ಅವನ ಹೆಸರು ಜಯನಾಥ ಸಿಂಹ. ಎಲ್ಲರೂ ಅವನನ್ನು ಜೈನೂ ಸಿಂಹ ಎಂದು ಕರೆಯುತ್ತಿದ್ದರು. ಅವನ ಅಣ್ಣ ದೇವನಾಥ ಸಿಂಹನನ್ನು ನಾನು ೧೯೩೮ರಲ್ಲಿ ಭೇಟಿಯಾಗಿದ್ದೆ. ಅವನು ಸತ್ಯಾಗ್ರಹದಲ್ಲಿ ಭಾಗಿಯಾಗಿರಲಿಲ್ಲ.

ನಾನು ವಾರಣಾಸಿಯನ್ನು ಬಿಟ್ಟಿದ್ದು ೧೯೩೭ರಲ್ಲಿ. ೧೯೩೭ರಿಂದ ನಾನು ಮೀರತ್‌ನಿಂದ ಪ್ರಕಟಿತವಾಗುವ **'ಸಂಕೀರ್ತನ'** ಎಂಬ ಮಾಸಪತ್ರಿಕೆಯ ಸಂಪಾದಕನಾಗಿದ್ದೆನು. ಆಗ ನಾನು ಕೆಲವು ದಿನಗಳಿಗಾಗಿ ವಾರಣಾಸಿಗೆ ಬಂದಿದ್ದೆನು.

ಒಂದು ದಿನ ದೇವನಾಥಸಿಂಹ ನನ್ನನ್ನು ಭೇಟಿಯಾಗಲು ಬಂದಿದ್ದನು. ಅವನು, ''ನನಗೆ ಭಗವದ್ಗೀತೆಯನ್ನು ಓದಬೇಕೆಂಬ ಆಸೆ. ಆದರೆ ಈ ವಯಸ್ಸಿನಲ್ಲಿ ಹಳ್ಳಿಯಲ್ಲಿ ಯಾರ ಹತ್ತಿರವಾದರೂ ಅಕ್ಷರವನ್ನು ಹೇಳಿಸಿಕೊಂಡು ಕಲಿಯಲು ನಾಚಿಕೆ. ತಾವು ಏನಾದರೂ ಉಪಾಯವನ್ನು ಸೂಚಿಸಿ'' ಎಂದನು.

ಅವನು ಜಮೀನ್ದಾರನಾಗಿದ್ದನು. ಆಗರ್ಭ ಶ್ರೀಮಂತನಾಗಿದ್ದನು. ಆದರೂ ಅಂದಿನ ದಿನಗಳಲ್ಲಿ ಅವರೆಲ್ಲ ಓದುಬರಹದ

ಕಡೆಗೆ ಗಮನ ಕೊಟ್ಟವರೇ ಅಲ್ಲ. ತಮ್ಮ ಮಕ್ಕಳೂ ಓದುಬರಹ ಕಲಿತು ಏನಾಗಬೇಕಾಗಿದೆ? ಯಾವ ಉದ್ಯೋಗವನ್ನು ಮಾಡ ಬೇಕಾಗಿದೆ? ಎನ್ನುತ್ತಿದ್ದರು. ಅವರ ತಮ್ಮ ಜಯನಾಥ ಸಿಂಹನೂ ಕಾಂಗ್ರೆಸ್ ಸೇರಿದ ಮೇಲೆಯೇ ಅಕ್ಷರಾಭ್ಯಾಸವನ್ನು ಮಾಡಿ ಹಿಂದಿ ಪುಸ್ತಕಗಳನ್ನು ಓದಲಾರಂಬಿಸಿದ್ದು.

ವಯಸ್ಸಾದ ಮೇಲೆ ಅಕ್ಷರಾಭ್ಯಾಸವನ್ನು ಮಾಡಲು ನಾಚಿಕೆ ಪಡಬೇಕಿಲ್ಲ. ಆದರೆ ೩೫ ವರ್ಷದ ದೇವನಾಥರಿಗೆ ಅದನ್ನು ನಾನು ಮನವರಿಕೆ ಮಾಡುವುದು ಹೇಗೆ? ಹಾಗೆಂದು ವರ್ಣ ಮಾಲೆಯ ಪರಿಚಯವೇ ಇಲ್ಲದವನಿಗೆ ಗೀತೆಯ ಶ್ಲೋಕವನ್ನು ಕಲಿಸಿಕೊಡುವುದು ಹೇಗೆ? ಹಾಗೆ ನೋಡಿದರೆ ನಂದಬಾಬಾ ಕೂಡ ತನ್ನ ಕನ್ಯೆಯರಿಗೆ ಓದುಬರಹ ಕಲಿಸಿರಲಿಲ್ಲ, ಬಾಲ್ಯ ದಿಂದಲೇ ಹಸುಗಳನ್ನು ಕಾಯಲು ಕಳಿಸಿಬಿಟ್ಟಿದ್ದನು. ಆದರೆ ಈ ಅನಕ್ಷರಸ್ಥ ಗೋಪಾಲ (ಶ್ರೀಕೃಷ್ಣ) ಯಾರನ್ನು ಬೇಕಿದ್ದರೂ ಮಹಾ ಪಂಡಿತನನ್ನಾಗಿ ಮಾಡಬಲ್ಲ ಎಂದು ನನಗೆ ನಂಬಿಕೆಯಿತ್ತು.

ನಾನು ದೇವನಾಥನಿಗೆ ಹೇಳಿದೆ, ''ಭಗವದ್ಗೀತೆ ಭಗವಂತನ ವಾಣಿ. ಅದು ಅವನ ಸಾಕ್ಷಾತ್‌ಸ್ವರೂಪ. ಗೀತೆಯನ್ನು ಸ್ಪರ್ಶಿಸಿ ದರೂ ಗೀತೆಯನ್ನು ಪಾರಾಯಣ ಮಾಡಿದಂತೆಯೇ. ನೀವು ಪ್ರತಿದಿನ ಗೀತೆಗೆ ಕೈ ಮುಗಿದು, ಅದನ್ನು ಎತ್ತಿಕೊಂಡು ಅಲ್ಲಿರುವ ಶ್ಲೋಕಗಳ ಮೇಲೆ ಬೆರಳುಗಳನ್ನು ಆಡಿಸಿರಿ.''

ನನ್ನ ಮಾತಿನಲ್ಲಿ ಅವನಿಗೆ ನೂರಕ್ಕೆ ನೂರು ನಂಬಿಕೆ ಬಂದಿತು. ಅವರ ಹತ್ತಿರ ಒಂದು ದೊಡ್ಡ ಅಕ್ಷರಗಳಲ್ಲಿರುವ ಗೀತೆಯ ಪುಸ್ತಕ ಇತ್ತು. ಪ್ರತಿದಿನ ಅವನು ಅದರ ಮೊದಲ ಶ್ಲೋಕದಿಂದ ಕೊನೆಯ ಶ್ಲೋಕದವರೆಗೆ ಬೆರಳುಗಳನ್ನು ಆಡಿಸುತ್ತಿದ್ದನು.

ಈ ಘಟನೆಯಾಗಿ ಒಂದು ವರ್ಷಕ್ಕೊ, ಎರಡು ವರ್ಷಕ್ಕೊ ನಾನು ಮತ್ತೆ ಮೀರತ್ತಿನಿಂದ ವಾರಣಾಸಿಗೆ ಹೋದೆನು. ದೇವ ನಾಥನಿಗೆ ಯಾರ ಮೂಲಕವೋ ನಾನು ಬಂದಿರುವ ವಿಷಯ ಗೊತ್ತಾಯಿತು. ಅವನು ನನ್ನನ್ನು ಭೇಟಿಯಾಗಲು ಬಂದನು. ಅವನು ಹೇಳಿದನು, ''ನಾನು ಗೀತೆಯ ಶ್ಲೋಕಗಳ ಮೇಲೆ ಬೆರಳನ್ನು ಆಡಿಸುವಾಗ ನನ್ನ ಬಾಯಿಯಿಂದ ಏನೇನೋ ಶಬ್ದ ಗಳು ಬರುತ್ತವೆ. ನಾನು ಏನು ಹೇಳುತ್ತೇನೆ ನನಗೇ ಅರ್ಥ ವಾಗುತ್ತಿಲ್ಲ.'' ನಾನು ಅವನೊಬ್ಬನೇ ಇರುವಾಗ ಅದನ್ನು ಓದಲು ಹೇಳಿದೆ. ಅವನು ಗೀತೆಗೆ ಕೈಮುಗಿದು, ಯಾವ ಶ್ಲೋಕದ ಮೇಲೆ ಬೆರಳನ್ನು ಇಟ್ಟನೋ ಆ ಶ್ಲೋಕ ಅವನ ಬಾಯಿಯಿಂದ ಸರಾಗ ವಾಗಿ ಬರತೊಡಗಿತು. ಅವನ ಉಚ್ಚಾರ ಸ್ಪಷ್ಟವಾಗಿತ್ತು. ಯಾವ ಶ್ಲೋಕದ ಮೇಲೆ ತಾನು ಕೈಯಿಟ್ಟರೂ ಅದೇ ಶ್ಲೋಕ ಅವನ ಬಾಯಲ್ಲಿ. ನನ್ನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ನಾನು ಅವನಿಗೆ ಅವನು ಪ್ರತಿದಿನ ಪೂಜಿಸಿ ಪ್ರಣಾಮ ಮಾಡುತ್ತಿರುವ ಗೀತೆಯನ್ನು ಬಿಟ್ಟು ಬೇರೆ ಗೀತೆಯ ಪುಸ್ತಕವನ್ನು ಕೊಡಲಿಲ್ಲ. ಅವನನ್ನು ಪರೀ ಕ್ಷಿಸುವುದು ನನ್ನ ಉದ್ದೇಶವಾಗಿರಲಿಲ್ಲ. ಆದರೆ ಅವನು ಆ ಗ್ರಂಥದ ಯಾವ ಪುಟವನ್ನು ತೆಗೆದು, ಯಾವ ಶ್ಲೋಕದ ಮೇಲೆ ಕೈಯಿಟ್ಟರೂ ಅದನ್ನು ಸರಿಯಾಗಿ ಹೇಳಿದನು.

ನಾನು ಅವನಿಗೆ, ''ನೀವು ಸರಿಯಾದ ಗೀತೆಯ ಶ್ಲೋಕಗಳನ್ನೇ ಹೇಳುತ್ತಿರುವಿರಿ'' ಎಂದು ಹೇಳಿದಾಗ ಅವನು ಭಾವವಿಹ್ವಲ ನಾದನು. ''ನನ್ನಂತಹ ಅಲ್ಪನ ಮೇಲೆ ಭಗವಂತನ ಇಂತಹ ವಿಶೇಷ ಕೃಪೆ!'' ಎನ್ನುತ್ತ ಅವನು ಗದ್ಗದಿತನಾದನು.

ಇನ್ನೊಮ್ಮೆ ಅವನು ನನ್ನನ್ನು ಪ್ರಯಾಗ ಹಾಗೂ ಹರಿದ್ವಾರ ದಲ್ಲಿ ಭೇಟಿಯಾದನು. ಅವನು ಆಗ ಕಾಲ್ನಡಿಗೆಯಲ್ಲಿ ಏಕಾಂಗಿ ಯಾಗಿ ಇಡೀ ಭಾರತ ತೀರ್ಥಯಾತ್ರೆಯನ್ನು ಮಾಡುತ್ತಿದ್ದನು. ಅವನು ಮೂರು ಸಲ ಸತತವಾಗಿ ಕಾಲ್ನಡಿಗೆಯಲ್ಲಿ ಇಡೀ ಭಾರತದ ತೀರ್ಥಯಾತ್ರೆಯನ್ನು ಮಾಡಿದನು. ನಾಲ್ಕನೆಯ ಸಲ ಯಾತ್ರೆಯನ್ನು ಮಾಡುತ್ತ ದ್ವಾರಕೆ ತಲುಪಿದನು. ಅಲ್ಲಿ ದೇವಸ್ಥಾನ ದಲ್ಲಿ ದ್ವಾರಕಾಧೀಶನ ದರ್ಶನವನ್ನು ಮಾಡುತ್ತಿರುವಾಗಲೇ ಅವನ ಪ್ರಾಣ ದ್ವಾರಕಾಧೀಶನಲ್ಲಿ ಲಯವಾಯಿತು.

ಇದು ನಾನು ಕೇಳಿದ ಕಥೆಯಲ್ಲ; ಕಣ್ಣಾರೆ ಕಂಡ ಘಟನೆ. ಇದನ್ನೇ ಗ್ರಂಥಕೃಪೆ ಎನ್ನುವುದು. ಗೀತೆ, ಭಾಗವತ, ರಾಮಾಯಣ ಇವೆಲ್ಲ ಮಂತ್ರಗ್ರಂಥಗಳು. ಅವುಗಳಲ್ಲಿನ ಶ್ಲೋಕಶ್ಲೋಕವೂ ಜೀವಂತ ಹಾಗೂ ಮಂತ್ರಗಳು. ಯಾರು ಅವನ್ನು ಶ್ರದ್ಧೆಯಿಂದ ಪಠಿಸುವರೋ ಅವರಿಗೆ ಅವು ಕೃಪೆಗೈಯುವವು.

೧೯೩೭-೩೮ರಲ್ಲಿ ವೃಂದಾವನದಲ್ಲಿ ಒಬ್ಬ ವೃದ್ಧ ಮಹಾತ್ಮ ರನ್ನು ನಾನು ಭೇಟಿಯಾಗಿದ್ದೆನು. ಅವರ ಹೆಸರು ಶ್ರೀ ಅವಧ ದಾಸಜೀ. ಶ್ರೀಮದ್ ಭಾಗವತ ಅವರ ಇಷ್ಟಗ್ರಂಥ. ಅವರು ಅದೆಷ್ಟೋ ವರ್ಷಗಳಿಂದ ಶ್ರೀಮದ್ ಭಾಗವತವನ್ನು ಮಾಸಿಕ ಪಾರಾಯಣ ಮಾಡುತ್ತಿದ್ದರು. ವೃದ್ಧಾಪ್ಯದಲ್ಲಿ ಅವರಿಗೆ ದೃಷ್ಟಿ ಕ್ಷೀಣವಾಗಿದ್ದರೂ ಒಂದು ಆಸನದಲ್ಲಿ ಸ್ಥಿರವಾಗಿ ಕುಳಿತುಕೊಂಡು, ಗ್ರಂಥವನ್ನು ಮುಂದೆ ಇಟ್ಟುಕೊಂಡು ಪಾರಾಯಣ ಮಾಡು ತ್ತಿದ್ದರು. ಇಡೀ ಗ್ರಂಥ ಅವರಿಗೆ ಕಂಠಸ್ಥವಾಗಿತ್ತು. ಇದು ಗ್ರಂಥಕೃಪೆ.

ತಾತ್ಪರ್ಯವೇನೆಂದರೆ, ನೀವು ನಿಮ್ಮ ಇಷ್ಟದ ಗ್ರಂಥವನ್ನು ನಿಷ್ಠೆಯಿಂದ ನಿತ್ಯಪಠಣ ಮಾಡುವುದಾದಲ್ಲಿ ನಿಮಗೆ ಗ್ರಂಥಕೃಪೆ ಯಾಗುತ್ತದೆ, ನಿಮ್ಮಲ್ಲಿ ಪ್ರೇಮಾಭಕ್ತಿ, ಊರ್ಜಿತಭಕ್ತಿ ಅವತರಿಸು ತ್ತದೆ.

ಶ್ರೀರಾಮಕೃಷ್ಣರು ನಮ್ಮ ಇಷ್ಟ. ಶ್ರೀರಾಮಕೃಷ್ಣರ ಮಂತ್ರ ನಮ್ಮ ಇಷ್ಟಮಂತ್ರ. 'ಶ್ರೀರಾಮಕೃಷ್ಣ ವಚನವೇದ' ನಮ್ಮ ಇಷ್ಟ ಗ್ರಂಥ. ಇಷ್ಟಮಂತ್ರ ಜಪಿಸುತ್ತ, ಇಷ್ಟಗ್ರಂಥವನ್ನು ನಿತ್ಯಪಾರಾ ಯಣ ಮಾಡುತ್ತ ಇದ್ದರೆ ಗ್ರಂಥಕೃಪೆಯಾಗುತ್ತದೆ, ಇಷ್ಟ ದೇವತೆಯ ಸಾಕ್ಷಾತ್ಕಾರವೇ ಆಗುತ್ತದೆ. ಇದಕ್ಕಿಂತ ಸುಲಭಸಾಧನೆ ಇನ್ನೇನು ತಾನೆ ಇದೆ?



# ಶ್ರೀಮಾತೆಯವರ ಪತ್ರಗಳು -೨

ಅನುವಾದ: **ಪ್ರವ್ರಾಜಿಕಾ ಧರ್ಮಪ್ರಾಣಾ**

ಶ್ರೀರಾಮಕೃಷ್ಣರು ಸದಾ ಆಧ್ಯಾತ್ಮಿಕತೆಯ ಉಚ್ಚ ಸ್ಥಿತಿಯಲ್ಲೇ ನೆಲೆಸಿರುತ್ತಿದ್ದರು. ಅವರಿಗೆ ತಮ್ಮ ಸಂಸಾರದ ಚಟುವಟಿಕೆಗಳಿಗೆ ಮನಸ್ಸನ್ನು ಕೊಡಲು ಸಾಧ್ಯವಾಗುತ್ತಿರಲೇ ಇಲ್ಲ. ಅದರ ಆವಶ್ಯಕತೆಯೂ ಬಂದಿರಲಿಲ್ಲ. ಶ್ರೀಮಾತೆಯವರೂ ಅದೇ ತರಹ ಉಚ್ಚ ಸ್ಥಾನದಲ್ಲಿ ನೆಲೆಸಿರುತ್ತಿದ್ದರು, ಅದರ ಜೊತೆಯಲ್ಲಿ ಅವರು ಈ ಜಗತ್ತಿನ ಮಾಯಾ ಸಂಸಾರದಲ್ಲಿಯೂ ಮುಳುಗಿರುತ್ತಿದ್ದರು—ಆದರೆ ನೀರಿನ ಮೇಲಿನ ತಾವರೆಯಂತೆ. ಸಂಸಾರದ ಚಟುವಟಿಕೆಗಳನ್ನು ಅತ್ಯಂತ ದಕ್ಷತೆಯಿಂದ ನಡೆಸುತ್ತಿದ್ದರು. ಅವರ ನಿತ್ಯಜೀವನದಲ್ಲಿ ಬರುತ್ತಿದ್ದ ಸಮಸ್ಯೆಗಳನ್ನು ಶಾಂತವಾಗಿ, ಆದರೂ ಕ್ರಿಯಾಶೀಲತೆಯಿಂದ ಅವರು ಬಗೆಹರಿಸಿಕೊಳ್ಳುತ್ತಿದ್ದರು. ಈ ಕೆಳಗಿನ ಅವರ ಒಂದು ಪತ್ರದಿಂದ ಅದನ್ನು ತಿಳಿಯಬಹುದು.

ಆ ವರ್ಷ ಜಯರಾಂಬಾಟಿಯಲ್ಲಿ ಸರಿಯಾಗಿ ಬೆಳೆ ಉಂಟಾಗದೆ ಶ್ರೀಮಾತೆಗೆ ಆರ್ಥಿಕವಾಗಿ ಸಮಸ್ಯೆ ಉಂಟಾಯಿತು. ಆದರೆ ಯಾವ ಭಕ್ತರ ಬಳಿಯೂ ಹಣಕ್ಕಾಗಿ ಕೈಚಾಚದೆ, ತಮ್ಮ ಜಮೀನನ್ನೇ ಮಾರಿ ಅವರು ಸಮಸ್ಯೆಯನ್ನು ಬಗೆಹರಿಸಿಕೊಂಡರು.

### ಪತ್ರ - ೧ ಸ್ವಾಮಿ ಯೋಗಾನಂದರಿಗೆ

ಶ್ರೀ ಶ್ರೀ ಕಾಳೀಮಾತೆಯ ಪಾದಗಳಲ್ಲಿ ಭರವಸೆ

೧೯.೪.೧೮೮೯
೩ನೇ ವೈಶಾಖ, ೧೨೯೬

ಪರಮ ಶುಭಾಶೀರ್ವಾದ. ವಿಶೇಷವೇನೆಂದರೆ,

ಮತ್ತೆ ನಿಮ್ಮೆಲ್ಲರ ಪತ್ರ ತಲುಪಿ ಎಲ್ಲಾ ವಿಷಯಗಳನ್ನೂ ತಿಳಿದುಕೊಂಡೆ. ಬಾಗ್‌ಬಜಾರಿನ ಬಲರಾಮ್ ಬಾಬುವಿನ ಬಳಿ ಶಿಹೋರಿನ ನನ್ನ ಜಮೀನಿನ ದಾಖಲೆಗಳ ಕಾಗದಪತ್ರಗಳು ಇವೆ. ಮಗು ಯೋಗೇನ್, ನೀನು ಹೋಗಿ ಆ ಕಾಗದಪತ್ರಗಳನ್ನು ಆದಷ್ಟು ಬೇಗ ಪಾರ್ಸೆಲ್ ಮಾಡಿ ಕಳುಹಿಸು. ಕಾರಣ, ಶಿಹೋರಿನ ಜಮೀನನ್ನು ಮಾರಾಟ ಮಾಡಬೇಕೆಂದು ಮನಸ್ಸು ಮಾಡಿದ್ದೇನೆ. ರಾಜಾರಾಮನಿಂದ ಈ ಸಲ ಧಾನ್ಯಗಳು ವಸೂಲಿಯಾಗದೇ ಇದ್ದುದರಿಂದ ದಾಖಲೆಗಳನ್ನು ಕಳುಹಿಸಲು ಬರೆದೆ. ಮೂರು ನಾಲ್ಕು ದಿನಗಳ ಮಧ್ಯೆ ಕಳುಹಿಸು. ಇತಿ,

ಇಲ್ಲಿ ಎಲ್ಲರಿಗೂ ಕ್ಷೇಮವೆಂದು ತಿಳಿ. ಅಲ್ಲಿಯ ಕ್ಷೇಮದ ಬಗ್ಗೆ ಯಾವಾಗಲೂ ಬರೆಯುತ್ತಿರು.

೧೨೯೬ನೇ ವರ್ಷ*, ೩ನೇ ದಿನ, ವೈಶಾಖ, ಶ್ರೀಮತಿ ಶಾರದಾದೇವಿ.

ಜಮೀನು ನನ್ನ ಸೋದರಮಾವನ ಮುಖಾಂತರ ಮಾರಾಟವಾಗುವುದು. ನಾನು ಕೋರ್ಟಿಗೆ ಹೋಗಬೇಕಾಗಿಲ್ಲ.

---

* ಇದು ಬಂಗಾಳಿ ವರ್ಷ



***ಪತ್ರ ಪಡೆದವರ ಹೆಸರು ಮತ್ತು ವಿಳಾಸ***

*ಅತಿ ಪ್ರೀತಿಯ*
*ಶ್ರೀಮಾನ್ ಯೋಗೇಂದ್ರನಾಥ್ ಚೌಧುರಿ*
*ಕಲ್ಕತ್ತ ವರಾಹನಗರ ಪರಾಮಾನೀಕ ಘಾಟ್ ರೋಡ್*
*ಹಳೆಯ ಮುನ್ಸಿಯವರ ಹಳೆಯ ಮನೆ,*
*ಆತ್ಮ ಉನ್ನತಿ ಸಭಾ—೩ ವೈಶಾಖ್, ಕಲ್ಕತ್ತ*

(ಟಿಪ್ಪಣಿ: ಯೋಗೇಂದ್ರನಾಥ ಚೌಧುರಿ ಎಂದರೆ ದಕ್ಷಿಣೇಶ್ವರದ ಯೋಗೇಂದ್ರ ನಾಥ್ ರಾಯ್‌ಚೌಧುರಿ; ಮುಂದೆ ಅವರು 'ಸ್ವಾಮಿ ಯೋಗಾನಂದ' ಎಂದೇ ಚಿರಪರಿಚಿತರು ಹಾಗೂ ಅವರು ಶ್ರೀಮಾತೆಯವರ ನಿಷ್ಠಾವಂತ ಸೇವಕರಾಗಿದ್ದರು.

### ಪತ್ರ -೨ ಬಲರಾಮ ಬಸುವಿಗೆ

ಶ್ರೀಮಾತೆಯವರು ಜಯರಾಂಬಾಟಿಯ ತಮ್ಮ ಸಂಸಾರದ ಎಲ್ಲ ವಿವರಗಳನ್ನೂ ಬಲರಾಮ ಬಸುವಿಗೆ ತಿಳಿಸುತ್ತಿದ್ದರು. ಅಂತೆಯೇ ಈ ಪತ್ರದಲ್ಲಿ ಕೆಲವು ದಿನಗಳ ಹಿಂದೆ ನಡೆದ ಜಗದ್ಧಾತ್ರೀ ಪೂಜೆಯ ವಿವರಣೆಯನ್ನೂ ಉಳಿದ ಸಣ್ಣ-ಪುಟ್ಟ ಸಮಾಚಾರಗಳನ್ನೂ ತಿಳಿಸುತ್ತಾರೆ.

ಶ್ರೀ ಶ್ರೀ ದುರ್ಗಾಸಹಾಯ

ಜಯರಾಂಬಾಟಿ
೧೪.೧೧.೧೮೯೯

ಆಶೀರ್ವಾದೊಂದಿಗೆ ಪತ್ರ —

ಶ್ರೀ ಶ್ರೀ ಜಗದ್ಧಾತ್ರೀ ಪೂಜೆ ಚೆನ್ನಾಗಿಯೇ ನಡೆಯಿತು. ಕಾಳಿಕೃಷ್ಣ ರಾಯ್‌ಜಿ (ಕಾಳಿಕೃಷ್ಣ ಬಾಬಾಜಿ?) ಯವರ ದರ್ಶನಕ್ಕೆಂದು ಹೋಗಿದ್ದೆ. ಆದುದರಿಂದ ಇಷ್ಟು ದಿವಸ ಪತ್ರ ಬರೆಯಲಾಗಲಿಲ್ಲ. ಈಗ ಹೇಗಿದ್ದೀರಿ? ವಿಶದವಾಗಿ ಸಮಾಚಾರ ಬರೆಯಿರಿ. ನಾನಂತೂ ಯಾವಾಗಲೂ ನಿನಗೆ (ನಿಮಗೆ) ಆಶೀರ್ವಾದ ಮಾಡುತ್ತಿರುತ್ತೇನೆ. ಅದರಿಂದ ನೀವು ಶಾರೀರಿಕವಾಗಿಯೂ, ಮಾನಸಿಕವಾಗಿಯೂ ಚೆನ್ನಾಗಿರಲಿ ಎಂದು. ಸಾರದಾ ಪಶ್ಚಿಮ ದಿಕ್ಕಿಗೆ ಹೋಗಲು ಹೊರಟಿದ್ದಾನೆ. ೭-೮ ಮೈಲಿ ಹೋದಾಗ ಜ್ವರ ಬಂತು, ಮರಳಿ ಬಂದ. ಈಗ ತುಂಬಾ ಚೆನ್ನಾಗಿದ್ದಾನೆ. ಯೋಗೇನ್ ಮತ್ತು ಗೋಲಾಪ್ ಅವರುಗಳು ಹೋಗುವುದು ಸುಮಾರು ಅಗ್ರಹಾಯಣ ೧೫ರ ಹೊತ್ತಿಗೆ ಇರಬಹುದು. ನನ್ನ ದೇಹಾರೋಗ್ಯ ಚೆನ್ನಾಗಿದೆ.

ಆಶೀರ್ವಾದ ಪತ್ರ

***ಪತ್ರ ಪತ್ರಪಡೆದವರ ಹೆಸರು ಮತ್ತು ವಿಳಾಸ***

*ಅತಿ ಪ್ರೀತಿಯ*
*ಚಿರಂಜೀವಿ ಶ್ರೀಮಾನ್ ಬಲರಾಮ್ ಬಸು*
*೫೭, ರಾಮಕಾಂತ ಬೋಸ್ ಸ್ಟ್ರೀಟ್*
*ಬಾಗ್‌ಬಜಾರ್, ಕಲ್ಕತ್ತ*

(ಟಿಪ್ಪಣಿ: ಸ್ವಾಮಿ ತ್ರಿಗುಣಾತೀತಾನಂದರ ಪೂರ್ವಾಶ್ರಮದ ಹೆಸರು ಶಾರದಾಪ್ರಸನ್ನ ಮಿತ್ರ. ಈ ಪತ್ರದಲ್ಲಿ ಅವರ ಬಗ್ಗೆ ಬರೆದಿದೆ.)

*(ಪತ್ರ ೩ ಡಿಸೆಂಬರ್ ೨೦೧೬ 'ವಿವೇಕಪ್ರಭ'ದಲ್ಲಿ ಪ್ರಕಟವಾಗಿದೆ.)*

**ಪತ್ರ-೪ ಮಹೇಂದ್ರನಾಥ ಗುಪ್ತ ('ಮ') ಅವರಿಗೆ**

'ಶ್ರೀರಾಮಕೃಷ್ಣವಚನವೇದ' ವನ್ನು ಬರೆದ ಮಹೇಂದ್ರನಾಥ ಗುಪ್ತ ಅವರಿಗೂ ಶ್ರೀಮಾತೆ ತಮ್ಮ ಎಲ್ಲಾ ಸಮಾಚಾರಗಳನ್ನು ತಿಳಿಸುತ್ತಿದ್ದರು. ಅವರ ಸಮಾಚಾರಗಳನ್ನೂ ತಿಳಿದುಕೊಳ್ಳುತ್ತಿದ್ದರು. ಅವರ ಪತ್ರಕ್ಕೆ ಉತ್ತರವಾಗಿ ೪, ೫ ಈ ಎರಡು ಪತ್ರಗಳಿವೆ.

ಶ್ರೀಶ್ರೀ ದುರ್ಗಾಸಹಾಯ

Postal date —೧೭ ಜನವರಿ, ೧೮೯೦
೪ನೇ ಮಾಘ

ಚಿರಂಜೀವಿಗೆ,

ಮೊದಲನೆಯದಾಗಿ ಪರಮ ಶುಭಾಶೀರ್ವಾದವನ್ನು ತಿಳಿಸಿ, ಮತ್ತೆ ವಿಶೇಷವೇನೆಂದರೆ,

ನಿನ್ನ ಪತ್ರ ಸಿಕ್ಕಿ ಎಲ್ಲಾ ಸಮಾಚಾರಗಳನ್ನು ತಿಳಿದುಕೊಂಡೆ. ಈ ತಿಂಗಳೇ ನಾನು ಹೋಗುವುದರಲ್ಲಿದ್ದೆ, ಆದರೆ ಅದು ನಡೆಯಲಿಲ್ಲ. ಏಕೆಂದರೆ ಈ ಸಮಯ ಜಮೀನು ಮಾರಾಟದ ಅಥವಾ ಬಾಡಿಗೆಕೊಡುವ ಸಮಯ.

ಮತ್ತೆ ಬೇರೆ ತಿಂಗಳಾದರೂ ಸಾಧ್ಯವಿಲ್ಲ. ಆದುದರಿಂದ ಹೋಗಲು ಆಗಲಿಲ್ಲ. ನನ್ನ ಆರೋಗ್ಯ ಅಷ್ಟೇನೂ ಚೆನ್ನಾಗಿಲ್ಲ. ಆಗಾಗ ಸ್ವಲ್ಪ ಸ್ವಲ್ಪ ತಲೆನೋವು ಬರುತ್ತಿದೆ. ಹಾಗೆಯೇ ಸ್ನಾನ ಆಹಾರ ನಡೆಯುತ್ತಿದೆ. ನೀನು ಹೇಗಿದ್ದೀಯಾ ಎಂದು ಬರೆ ಮತ್ತು ನನಗಾಗಿ ಚಿಂತೆ ಮಾಡಬೇಡ. ಬಲರಾಮ್ ಬಾಬು ಹೇಗಿದ್ದಾನೆ ಅವನ ಸಮಾಚಾರ ಬರೆ. ಯೋಗೇನ್ ಬಾಬುವಿನ ಪತ್ರ ಸಿಕ್ಕಿದೆ. ಆದಷ್ಟು ಬೇಗ ಕಲ್ಕತ್ತಕ್ಕೆ ಬರುವನೆಂದು ಕೇಳಿದೆ. ಮತ್ತೆ ೫ ರೂಪಾಯಿ ತಲುಪಿದೆ.

ಆಶೀರ್ವಾದದೊಂದಿಗೆ —

ತಾಯಿ

**ಪತ್ರ-೫ ಮಹೇಂದ್ರನಾಥ ಗುಪ್ತ ('ಮ') ಅವರಿಗೆ**

ಶ್ರೀಗುರುದೇವ ಸಹಾಯ

Postal date —೨೭ ಡಿಸೆಂಬರ್, ೧೮೯೦
೧೧ನೇ ಪೌಷ

ಚಿರಂಜೀವಿಗೆ,

ಪರಮ ಶುಭಾಶೀರ್ವಾದ

ನಿಮ್ಮ (ನಿನ್ನ) ಕೆಲವು ಪತ್ರಗಳು ತಲುಪಿ, ಸಮಾಚಾರಗಳನ್ನೆಲ್ಲ ತಿಳಿದುಕೊಂಡೆ. ಆದರೆ ನಿಮಗೆ (ನಿನಗೆ) ಪತ್ರ ಬರೆಯಲಾಗಲಿಲ್ಲ. ಕಾರಣ, ವಿಳಾಸ ತಿಳಿದಿಲ್ಲ. ಈಗ ನಿಮ್ಮ (ನಿನ್ನ) ವಿಳಾಸ ಸಿಕ್ಕಿ ಪತ್ರ ಬರೆದೆ. ನೀವು ರಿಜಿಸ್ಟರ್ ಮಾಡಿ ೧೦ರೂಪಾಯಿ ಕಳುಹಿಸಿದ್ದೀರಿ, ಅದು ನನಗೆ ಸಿಕ್ಕಿದೆ. ನಾನು ನಿಮ್ಮೆಲ್ಲರ ಗುರುದೇವನ ಹತ್ತಿರ ಎಲ್ಲರಿಗೂ ಮಂಗಳವಾಗಲಿ ಎಂದು ಪ್ರಾರ್ಥಿಸುತ್ತೇನೆ. ಭಗವಂತನನ್ನು ಪ್ರಾರ್ಥಿಸಲು ತಲೆಯನ್ನು ಸರಿಯಾಗಿ ಇಟ್ಟುಕೊಳ್ಳಬೇಕು. ಸಂಸಾರದ ಯಾವುದೇ ಮಾಯಾಸಂಬಂಧವನ್ನೂ ಭಗವಂತನ ಜೀವವೆಂದೇ ತಿಳಿದುಕೊಳ್ಳಬೇಕು. ಅವರನ್ನು ಭಗವಂತನೇ ಕಳುಹಿಸಿದ್ದಾನೆ. ಅವರು (ಶ್ರೀರಾಮಕೃಷ್ಣರು) ಹೇಳಿದ್ದರು, ನನ್ನ ಬಳಿ ಯಾರು ಬರುವರೋ, ಅವರೆಂದಿಗೂ ಹುಚ್ಚರಾಗುವುದಿಲ್ಲ ಎಂದು. ನಿನ್ನ ಮನಸ್ಸಿನ ಶಾಂತಿಗಾಗಿ ನಾನು ಯಾವಾಗಲೂ ಶ್ರೀಶ್ರೀ ಗುರುದೇವರಲ್ಲಿ ಪ್ರಾರ್ಥಿಸುತ್ತಿದ್ದೇನೆ. ಮತ್ತೆ ಸೊಸೆಯಮ್ಮ ಬರಬೇಕಿತ್ತು. ಆದರೆ ನಿಮಗೆ ಯಾವಾಗ ಅನುಕೂಲವಾಗುವುದೋ ಆಗ ಕಳುಹಿಸಿ. ಇಲ್ಲಿ ಎಲ್ಲರೂ ಕ್ಷೇಮ. ಅಲ್ಲಿಯ ಕ್ಷೇಮಸಮಾಚಾರಗಳನ್ನು ಬರೆದು ತಿಳಿಸು. ಇತಿ—

ಆಶೀರ್ವಾದದೊಂದಿಗೆ,

ನಿನ್ನ ತಾಯಿ



# ಕಳೆದ ದಿನಗಳ ನೆನಪುಗಳು

(ಸ್ವಾಮಿ ವಿರಜಾನಂದರ ಜೀವನ ಹಾಗೂ ಕೆಲವು ಸಮಕಾಲೀನ ಘಟನೆಗಳು)

ಮೂಲ ಬಂಗಾಳಿ: **ಸ್ವಾಮಿ ಶ್ರದ್ಧಾನಂದ**

ಅನುವಾದ: **ಪ್ರವ್ರಾಜಿಕಾ ಯೋಗಾತ್ಮಪ್ರಾಣಾ**

## ಭಾಗ ೪



**ಖ**ಗೇನನು ಮಾಸ್ಟರ್ ಮಹಾಶಯರ ವಿಷಯವಾಗಿ ಕಂಡುಕೊಂಡ ಸಂಗತಿ ಹಾಗೂ ಅವರೊಂದಿಗೆ ಬೆಳೆಸಿಕೊಳ್ಳುತ್ತಿದ್ದ ನಿಕಟ ಸಂಪರ್ಕ ಕಾಳೀಕೃಷ್ಣ ಮತ್ತು ಇತರರ ಕಣ್ಣಿಗೆ ಬೀಳದಿರಲಿಲ್ಲ. ಕಾಳೀಕೃಷ್ಣನೂ ಒಂದು ದಿನ ಒಬ್ಬನೇ ಮಾಸ್ಟರ್ ಮಹಾಶಯನ ಮನೆಗೆ ಭೇಟಿಯಿತ್ತನು. ಅಲ್ಲಿ ನೋಡುವಾಗ, ಗಂಭೀರ ಪ್ರಕೃತಿಯ ಅಧ್ಯಾಪಕರು ಮನೆಯಲ್ಲಿ ಬೇರೆಯೇ ಮೂರ್ತಿಯಾಗಿದ್ದರು. ಅವರು ಕಚ್ಚೆಯ ತುದಿಯನ್ನು ಮೈಗೆ ಹೊದ್ದುಕೊಂಡು, ಚಾಪೆಯ ಮೇಲೆ ನಗುಮುಖದಿಂದ ಕುಳಿತಿದ್ದರು. ಕಾಳೀಕೃಷ್ಣನನ್ನು ಕಂಡ ಅವರು ಆದರದಿಂದ ಅವನನ್ನು ತಮ್ಮ ಬಳಿಗೆ ಕರೆದು, ಪಕ್ಕದಲ್ಲಿಯೇ ಮೈಗೆ ಮೈ ತಗಲುವಷ್ಟು ಹತ್ತಿರ ಕುಳ್ಳಿರಿಸಿಕೊಂಡರು. ಈ ವಿನೀತ ಸ್ವಭಾವದ ಹುಡುಗನಾದರೋ ಈಗ ಸಂಕೋಚದ ಮುದ್ದೆಯಾದ. ಅವರು ಆತ್ಮೀಯತೆಯಿಂದ ಮಾತನಾಡತೊಡಗಿದರು. ಅವರೆಲ್ಲ ಕಾಂಕುರಗಾಛಿ ಯೋಗೋದ್ಯಾನಕ್ಕೆ ಹೋಗಿಬರುತ್ತಿದ್ದ ವಿಷಯ ತಿಳಿದು ಮಾಸ್ಟರ್‌ಗೆ ತುಂಬ ಸಂತೋಷವಾಯಿತು. ಅವರೆಂದರು: ''ನೋಡು, ಠಾಕೂರರು ಕಾಮಿನಿ-ಕಾಂಚನ ತ್ಯಾಗಿಗಳಾಗಿದ್ದರು. ಅವರನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂದಿದ್ದರೆ ಕಾಮಿನಿ-ಕಾಂಚನ ತ್ಯಾಗಮಾಡಿದ ಅವರ ಸಂನ್ಯಾಸೀ ಶಿಷ್ಯರ ಸತ್ಸಂಗ ಮಾಡಬೇಕು. ವರಾಹನಗರದ ಮಠಕ್ಕೆ ಹೋಗು! ಅಲ್ಲಿ ಅವರ ತ್ಯಾಗೀ ಶಿಷ್ಯರು ಹೇಗೆ ಜೀವನ ನಡೆಸುತ್ತಿದ್ದಾರೆ ಎಂಬುದನ್ನು ಕಣ್ಣಾರೆ ನೋಡಬಹುದು. ಗೃಹಸ್ಥರು ಸಾವಿರ ಮಂದಿ ಇರಲಿ, ಶ್ರೀರಾಮಕೃಷ್ಣರ ಭಾವವನ್ನು ಸರಿಯಾಗಿ represent ಮಾಡ (ಪ್ರತಿನಿಧಿಸ) ಲಾರರು.'' ಇದಲ್ಲದೆ, ಸಾಧುಗಳ ಬಳಿಗೆ ಹೋಗುವಾಗ ಬರಿಗೈಯಲ್ಲಿ ಹೋಗಬಾರದು; ಕಡೇಪಕ್ಷ ಒಂದು ಪೈಸೆಗೆ ಏನನ್ನಾದರೂ ತೆಗೆದುಕೊಂಡು ಹೋಗಬೇಕು ಎಂದರು.

### ಕೆಲವು ದಿನಗಳ ನಂತರ ನಡೆದ ಒಂದು ಘಟನೆ

ಠಣ್! ಠಣ್! ಠಣ್! ಎಂದು ಕಾಲೇಜಿನ ಗಂಟೆ ಬಾರಿಸಿತು. ಹತ್ತೂವರೆ ಗಂಟೆಯ ತರಗತಿ ಆರಂಭವಾಗಲಿದೆ. ಕಾಳೀಕೃಷ್ಣನ ಇಡೀ ಆಂತರ್ಯ ಹಠಾತ್ತನೆ ಪ್ರತಿಭಟಿಸಿತು. 'ದಿನಾ ಇರುವುದೇ! ಅದೇ ಓದು, ಅದೇ ಬರಹ, ಅದೇ ದಿನನಿತ್ಯದ ಆಗುಹೋಗುಗಳು. ಅದೇರೀತಿ ಕತ್ತು ಬಾಗಿಸಿ ಅಧ್ಯಾಪಕರ ಉಪನ್ಯಾಸವನ್ನು ಆಲಿಸುವಾಟ. ಥತ್! ಹಾಳಾಗಿ ಹೋಗಲಿ, ನಾನಂತೂ ಇಂದು ತರಗತಿಗೆ ಹೋಗುವುದಿಲ್ಲ. ಸುಮ್ಮನೆ ವರಾಹನಗರ ಮಠಕ್ಕೆ ಹೋಗಿಬಿಡುತ್ತೇನೆ' ಎಂದು ಅವನ ಮನಸ್ಸು ನಿರ್ಧರಿಸಿಬಿಟ್ಟಿತು. ಇದರ ಚುರುಕು ಖಗೇನ್ ಮತ್ತು ಕುಂಜರಿಗೂ ತಟ್ಟಿತು. ಸರಿ, ಮೂವರೂ ಪಾಟಾಲಡಂಗಾದಲ್ಲಿದ್ದ ಖಗೇನನ ಮನೆಯಲ್ಲಿ ಪುಸ್ತಕವನ್ನಿರಿಸಿ, ನಡೆದೇಬಿಟ್ಟರು. ತಮ್ಮ ಉಪಾಹಾರದ ಹಣವನ್ನೆಲ್ಲಾ ಸೇರಿಸಿ ಜಿಲೇಬಿ ಖರೀದಿಸಿದರು. ರಾಮಕೃಷ್ಣರು ಜಿಲೇಬಿಯನ್ನು ಇಷ್ಟಪಡುತ್ತಿದ್ದರೆಂದು ಅವರು ಕೇಳಿದ್ದರು.

ಕಾಳೀಕೃಷ್ಣನ ಸ್ಮೃತಿಯಲ್ಲಿ ಅಂದಿನ ಘಟನೆ ಹೀಗಿದೆ:

''ಬಿಸಿಲಿನಲ್ಲಿ ನಾಲ್ಕು ಮೈಲಿ ನಡೆದು, ಅಪರಾಹ್ನ ಒಂದು ಗಂಟೆಯ ಹೊತ್ತಿಗೆ ವರಾಹನಗರದ ಮಠಕ್ಕೆ ಹೋದೆವು. ಅಲ್ಲಿ ಎಲ್ಲರೂ ದೊಡ್ಡ ಕೊಠಡಿಯಲ್ಲಿ ವಿಶ್ರಮಿಸುತ್ತಿದ್ದರು. ಆದರೆ ಎಚ್ಚರವಾಗಿಯೇ ಇದ್ದರು. ನನಗೆ ನೆನಪಿದ್ದಂತೆ ಶಶಿ ಮಹಾರಾಜ್, ನಿರಂಜನ್ ಮಹಾರಾಜ್, ಮಹಾಪುರುಷ ಮಹಾರಾಜ್, ಬಡೋ ಗೋಪಾಲ್ ಮಹಾರಾಜ್, ಯೋಗಿನ್ ಮಹಾರಾಜ್, ಲಾಟು ಮಹಾರಾಜ್, ಖೋಕಾ ಮಹಾರಾಜ್, ಸಾರದಾ ಮಹಾರಾಜ್ ಮತ್ತು ದಕ್ಷ ಮಹಾರಾಜ್ ಇವರುಗಳೇ ಆಗ ಮಠದಲ್ಲಿದ್ದವರು. ನಾವು ನಮಸ್ಕರಿಸಿದ ನಂತರ ನಮ್ಮನ್ನು ಎಲ್ಲರೂ ಆದರದಿಂದ ಕೂರಿಸಿ, 'ಎಲ್ಲಿಂದ

ಬಂದಿರಿ? ಏನು ಮಾಡುತ್ತಿರುವಿರಿ? ಎಲ್ಲಿರುವಿರಿ? ಮಠದ ವಿಷಯ ಹೇಗೆ ತಿಳಿಯಿತು?' ಎಂದೆಲ್ಲಾ ಪ್ರಶ್ನಿಸಿದರು. ನಮ್ಮಿಂದ ವಿವರವನ್ನು ತಿಳಿದು ತುಂಬ ಸಂತೋಷಪಟ್ಟರು, ಬಹಳ ಉತ್ಸಾಹ ವನ್ನು ನೀಡಿದರು. ಅವರುಗಳನ್ನು ನೋಡಿ ನಮಗೊಂದು revel-ation (ಜ್ಞಾನೋದಯವೇ) ಆದಂತಾಯಿತು. ಜಗತ್ತಿಗೆ ಅತೀತ ವಾದ ಸ್ಥಳವೊಂದಕ್ಕೆ ಬಂದಿರುವಂತೆ ನಮಗನ್ನಿಸಿತು. ಅದಾದರೋ ಪಾಳು ಬಿದ್ದ ಮನೆ, ಮುರಿದ ಕಿಟಕಿ, ಬಾಗಿಲುಗಳು. ಆದರೆ ಅಲ್ಲಿ ಆಧ್ಯಾತ್ಮಿಕತೆಯು ಘನೀಭೂತವಾದಂತಿತ್ತು. ಅವರೆಲ್ಲ burning flameನಂತೆ (ಪ್ರಜ್ವಲಿಸುವ ಅಗ್ನಿಯಂತೆ) ಕಾಣುತ್ತಿದ್ದರು. ಮಠದ ಪರಿಸರ ಬಹಳ ಸರಳವಾಗಿತ್ತು. ನೆಲದಲ್ಲಿ ಚಾಪೆಯನ್ನು ಹಾಸಲಾಗಿತ್ತು ಅಷ್ಟೆ. ಮತ್ತಾವ ಸಾಮಗ್ರಿಗಳೂ ಇರಲಿಲ್ಲವೆಂದೇ ಹೇಳಬಹುದು. ಹಜಾರದ ಗೋಡೆಯಲ್ಲಿ ದುರ್ಗಾ, ಕಾಳಿ, ಕ್ರಿಸ್ತ ಮುಂತಾದವರ ಚಿತ್ರಪಟಗಳನ್ನು ತೂಗುಹಾಕಿದ್ದರು. ಒಂದೊಂದು ಚಿತ್ರದ ಕೆಳಗೂ ಕೆಲವು ಉಕ್ತಿಗಳನ್ನು ಬರೆಯಲಾಗಿತ್ತು. '**ಮುಕ್ತಿ ಮಿಚ್ಛಸಿ ಚೇತ್ ತಾತ ವಿಷಯಾನ್ ವಿಷವತ್ ತ್ಯಜ**' *(ಅಷ್ಟಾವಕ್ರ ಗೀತೆ)* ಇತ್ಯಾದಿ. ಸ್ವಾಮಿ ವಿವೇಕಾನಂದರು ಆರು ತಿಂಗಳ ಹಿಂದೆ (ಜುಲೈ ೧೮೯೦) ಪರಿವ್ರಾಜಕರಾಗಿ ಹೊರಟುಹೋಗಿದ್ದರು. ನಾವು ಸ್ವಲ್ಪ ದಿನಗಳ ಹಿಂದೆ ಹೋಗಿದ್ದರೆ ಸ್ವಾಮೀಜಿಯವರನ್ನೂ ಭೇಟಿಯಾಗಬಹುದಿತ್ತು ಎಂದು ಅವರು ನಮಗೆ ತಿಳಿಸಿದರು. ಶ್ರೀರಾಮಕೃಷ್ಣರ ತ್ಯಾಗೀ ಶಿಷ್ಯರೊಂದಿಗೇ ಮಾತನಾಡಿ ನಾವೆಲ್ಲ ಮುಗ್ಧರಾದೆವು. ನಾಲ್ಕು ಗಂಟೆಗೆ ದೇವರಮನೆ ತೆಗೆದಾಗ ಅಲ್ಲಿ ನಾವೆಲ್ಲರೂ ನಮಸ್ಕರಿಸಿ, ಪ್ರಸಾದ ಪಡೆದು ಹಿಂದಿರುಗಿದೆವು. ನಾವು ಹೊರಡುವಾಗ ಅವರು, 'ಇಲ್ಲಿಗೆ ನೀವು ಆಗಾಗ ಬನ್ನಿ' ಎಂದು ಹೇಳಿದರು.

''ಅಂದಿನಿಂದ ನಾವು ರಜೆ ಸಿಕ್ಕಾಗಲೆಲ್ಲಾ ವರಾಹನಗರಕ್ಕೆ ಹೋಗಲಾರಂಭಿಸಿದೆವು. ಮಠದೊಡನೆ ಸಂಪರ್ಕ ದಿನೇದಿನೇ ಹೆಚ್ಚಾಗಿ, ಅದರ ಆಕರ್ಷಣೆ ತೀವ್ರಗೊಳ್ಳುತ್ತಿದ್ದಂತೆಯೇ ನಾವು ಯೋಗೋದ್ಯಾನಕ್ಕೆ ಹೋಗಿಬರುವುದು ಕಡಿಮೆಯಾಗತೊಡ ಗಿತು. ದಾಕ್ಷಿಣ್ಯಕ್ಕೆ ತಿಂಗಳಿಗೊಮ್ಮೆ ಹೋಗಿಬರುತ್ತಿದ್ದೆವು, ಅಷ್ಟೆ. ಮೊದಮೊದಲು ರಾಮಬಾಬುವಿನ ಮಾತುಕಥೆಗಳಿಂದ ಅವರೊ ಬ್ಬರೇ ಶ್ರೀರಾಮಕೃಷ್ಣರ ಪ್ರಿಯತಮ ಶಿಷ್ಯರು ಹಾಗೂ ಅವರು ಮಾತ್ರವೇ ಶ್ರೀರಾಮಕೃಷ್ಣರನ್ನು ಚೆನ್ನಾಗಿ ಅರಿತಿರುವವರು ಎಂದೆನಿ ಸಿತ್ತು. ಅಲ್ಲದೆ ಸಂನ್ಯಾಸೀ ಶಿಷ್ಯರು ಶಿವ, ದುರ್ಗಾ, ಕೃಷ್ಣ, ಕಾಳಿ ಮುಂತಾದ ದೇವದೇವಿಯರನ್ನೂ, ಕ್ರಿಸ್ತ, ಮಹಮ್ಮದ, ಶಂಕರಾ ಚಾರ್ಯ, ಚೈತನ್ಯ ಮುಂತಾದ ಅವತಾರಗಳ ಪೂಜೆಯನ್ನು ಮಾಡುತ್ತಿದ್ದುದರಿಂದಲೂ, ವೇದಾಂತ ಶಾಸ್ತ್ರಗಳ ಅಧ್ಯಯನ ಮಾಡುತ್ತಿದ್ದುದರಿಂದಲೂ ಅವರುಗಳಿಗೆ ಶ್ರೀರಾಮಕೃಷ್ಣರಲ್ಲಿ ಸಂಪೂರ್ಣ ವಿಶ್ವಾಸವಾಗಲೀ, ನಿಷ್ಠೆಯಾಗಲೀ ಇಲ್ಲ ಎಂಬ ಭಾವನೆ ಬಂದಿತ್ತು. ಆದರೆ ಮಠದ ಸಂಪರ್ಕಕ್ಕೆ ಬಂದ ನಂತರ ನಮ್ಮ ತಿಳು ವಳಿಕೆ ತಪ್ಪು ಎಂದೂ, ಶ್ರೀರಾಮಕೃಷ್ಣರಿಗೆ ಇತರ ಧರ್ಮಗಳ ಬಗ್ಗೆ ಸಂಕುಚಿತ ಭಾವನೆಯಾಗಲೀ ಸಂಪ್ರದಾಯಬದ್ಧತೆಯಾಗಲೀ ಇರಲಿಲ್ಲವೆಂದೂ ನಮಗೆ ಅರಿವಾಯಿತು.

''ಇನ್ನು ವರಾಹನಗರದ ಮಠದಲ್ಲಿದ್ದ ಶಶಿ ಮಹಾರಾಜ್; ಅವರನ್ನು ನೋಡಿದರೆ ಭಯವಾಗುತ್ತಿತ್ತು. ಸದಾ ಅವರು ಯಾವುದೋ ಒಂದು ಭಾವದಲ್ಲಿ ಮಗ್ನರಾಗಿದ್ದಂತೆ ಕಂಡುಬರು ತ್ತಿದ್ದರು. ಅವರು ತುಂಬ ಕಟ್ಟುನಿಟ್ಟಿನ ಮನುಷ್ಯ. ನಾವು ಓದುವು ದನ್ನೇನಾದರೂ ತಪ್ಪಿಸಿಕೊಳ್ಳಲು ಮಠಕ್ಕೆ ಬರುತ್ತಿದ್ದೇವೋ ಹೇಗೆ ಎಂದು ಪರಿಶೀಲಿಸುತ್ತಿದ್ದರು. ವ್ಯಾಸಂಗದ ವಿಷಯದ ಬಗ್ಗೆ ಕೂಡ ನಮ್ಮನ್ನು ಅನೇಕ ರೀತಿಯಲ್ಲಿ ಪ್ರಶ್ನಿಸುತ್ತಿದ್ದರು. ಒಂದು ದಿನ ನನ್ನನ್ನು ಪ್ರಶ್ನಿಸಲಾರಂಭಿಸಿದರು. ಆಗ ನಾನು, ''ಬೇರೆ ಯಾವ ವಿಷಯವನ್ನಾದರೂ ಕೇಳಿ, ಆದರೆ ಗಣಿತದಲ್ಲಿ ಏನನ್ನೂ ಪ್ರಶ್ನಿಸ ಬೇಡಿ. ನಾನು ಅದರಲ್ಲಿ ಬಹಳ ಹಿಂದೆ'' ಎಂದು ಮೊದಲೇ ಒಪ್ಪಿ ಕೊಂಡುಬಿಟ್ಟೆ. ನಾನು ಹಾಗೆಂದುದಕ್ಕೆ ಶಶಿ ಮಹಾರಾಜರು, ''ನೀನು ಬೇಸಿಗೆ ರಜೆಯಲ್ಲಿ ಒಂದೂವರೆ ತಿಂಗಳು ಇಲ್ಲಿಗೆ ಬಂದು ಬಿಡು. ನಾನು ನಿನಗೆ ಹೇಗೆ ಗಣಿತ ಕಲಿಸಿಕೊಡುತ್ತೇನೆಂದರೆ, ನಿನಗೆ ಫೇಲ್ ಆಗುವ ಭಯವಿರುವುದಿಲ್ಲ'' ಎಂದು ಹೇಳಿದರು. ಅದಕ್ಕೆ



ಶಶಿ ಮಹಾರಾಜ್ (ಸ್ವಾಮಿ ರಾಮಕೃಷ್ಣಾನಂದರು)

ನಾನು, ''ತಂದೆಯವರನ್ನು ಕೇಳಿ ನೋಡುತ್ತೇನೆ'' ಎಂದು ಹೇಳಿ ಬಂದೆ.

''ತಂದೆಯವರನ್ನು ಕೇಳಿದಾಗ ಅವರು ತಕ್ಷಣವೇ ಒಪ್ಪಿಕೊಂಡರು. ಮಗ ಪಾಸಾಗುವ ಹಾಗಿದ್ದರೆ ಒಳ್ಳೆಯದೇ ಎಂದು ಅವರಿಗೆ ಅನಿಸಿರಬೇಕು. ''ಸರಿ, ಹೋಗಿ ಬಾ'' ಎಂದರು. ಬೇಸಿಗೆಯ ರಜೆ ಸಿಕ್ಕಿದೊಡನೆಯೇ ನಾನು ಪಠ್ಯಪುಸ್ತಕಗಳನ್ನೆಲ್ಲಾ ಕಟ್ಟಿಕೊಂಡು ಮಠಕ್ಕೆ ಹಾಜರಾದೆ. ಎಲ್ಲರಿಗೂ ತುಂಬ ಖುಷಿಯಾಯಿತು. ಆದರೆ ಮಠಕ್ಕೆ ಹೋದ ನಂತರ ಪಠ್ಯಪುಸ್ತಕ, ಓದು-ಬರಹ ಎಲ್ಲಾ ಬಿಟ್ಟೇ ಹೋಯಿತು. ಠಾಕೂರರ ಕೆಲಸ ಹಾಗೂ ಎಲ್ಲ ಸಂನ್ಯಾಸಿಗಳ ಸೇವೆ ಮಾಡುತ್ತಾ ಮನಸ್ಸು ತುಂಬಿಹೋಯಿತು. ಆಗ ಅಲ್ಲಿ ಯಾವ ಕೆಲಸದವರೂ ಇರಲಿಲ್ಲ. ನಾನೇ ಅವರ ಎಲ್ಲಾ ಕೆಲಸಗಳಲ್ಲಿಯೂ ಸಹಾಯ ಮಾಡುತ್ತಿದ್ದೆ. ಪುಷ್ಕರಿಣಿಯಿಂದ ನೀರು ತರುವುದು, ಹೂ ಬಿಡಿಸುವುದು, ಪಾತ್ರೆ ತೊಳೆಯುವುದು, ಹೀಗೆ ನಾನಾ ಕೆಲಸಗಳಲ್ಲಿ ಬೆಳಗಿನಿಂದ ರಾತ್ರಿ ಹತ್ತರವರೆಗೂ ತಲ್ಲೀನನಾಗಿರುತ್ತಿದ್ದೆ. ದಿನ ಕಳೆದದ್ದೇ ತಿಳಿಯುತ್ತಿರಲಿಲ್ಲ; ಅದಾವುದೋ ಗುಂಗಿನಲ್ಲಿ ಒಂದೂವರೆ ತಿಂಗಳು ಕಳೆದೇ ಹೋಯಿತು. ''ಎಲ್ಲಿ, ನಿನ್ನ ಪುಸ್ತಕ ನೋಡೋಣ'' ಎಂದು ಒಮ್ಮೆಯಾದರೂ ಶಶಿ ಮಹಾರಾಜರು ಕೇಳಲಿಲ್ಲ; ನನಗೂ ಆ ಬಗ್ಗೆ ಅವರನ್ನು ಕೇಳಬೇಕೆಂಬ ಪ್ರಜ್ಞೆಯೂ ಇರಲಿಲ್ಲ. ರಜೆಯ ನಂತರ ಕಾಲೇಜು ತೆರೆಯುವುದಲ್ಲಾ, ಮನೆಗೆ ಹಿಂತಿರುಗಬೇಕಲ್ಲಾ ಎಂದು ನೆನೆದು ಮನಸ್ಸು ಚಡಪಡಿಸಲಾರಂಭಿಸಿತು. ಆದರೆ ಬೇರೆ ದಾರಿಯೇ ಇರಲಿಲ್ಲ, ಹಿಂತಿರುಗಿ ಹೋಗಲೇಬೇಕಿತ್ತು. ''ಏಕೆ ಇಷ್ಟೊಂದು ಬೇಸರ? ಸಮಯ ಸಿಕ್ಕಾಗಲೆಲ್ಲಾ ಬಂದು ೨-೩ ದಿನ ಮಠದಲ್ಲಿದ್ದು ಹೋಗುವೆಯಂತೆ, ಚಿಂತೆಯೇಕೆ?'' ಎಂದು ಅವರೆಲ್ಲರೂ ನನ್ನನ್ನು ಸಂತೈಸಿದರು.''

* * *

ಕಾಳೀಕೃಷ್ಣನ ಪ್ರಾಣ ಸುಮ್ಮನೆ ಒದ್ದಾಡುತ್ತಿತ್ತು; ಮನಸ್ಸು ವ್ಯಾಸಂಗವನ್ನು ನಿರಾಕರಿಸುತ್ತಿತ್ತು. ಸ್ವತಃ ಅವನಿಗೇ ಬಹಳ ಆಶ್ಚರ್ಯವಾಯಿತು. ಓದು-ಬರಹದಲ್ಲಿದ್ದ ಆಸಕ್ತಿ ದಿನಕಳೆದಂತೆ ಬತ್ತಿಯೇ ಹೋಗುತ್ತಿತ್ತು. ಅವನ ತಂದೆ ತನ್ನ ಚಿಕಿತ್ಸಾಲಯದ ಲೆಕ್ಕಪತ್ರಗಳನ್ನೆಲ್ಲ ಮುಗಿಸಿ ಮನೆಗೆ ಬರುವಾಗ ಪ್ರತಿದಿನವೂ ರಾತ್ರಿ ೧೧-೧೨ ಗಂಟೆಯಾಗುತ್ತಿತ್ತು. ಅವನು ಬಂದಾಗ ಹಜಾರದಲ್ಲಿ ಕುಳಿತು ಅಧ್ಯಯನದಲ್ಲಿ ನಿರತನಾದ ಕಾಳೀಕೃಷ್ಣನನ್ನು ಕಾಣುತ್ತಿದ್ದ. ರಾತ್ರಿ ಬಹಳ ಹೊತ್ತಿನವರೆಗೆ ದೀಪ ಉರಿಯುತ್ತಿದ್ದರೂ, ಈಗೀಗ ಆ ಬೆಳಕಿನ ಮುಂದೆ ಏಕಾಗ್ರ ಮನಸ್ಸಿನಿಂದ ವ್ಯಾಸಂಗ ಮಾಡುತ್ತಿದ್ದ ಕಾಲೇಜು ಹುಡುಗನಲ್ಲ ಇರುತ್ತಿದ್ದುದು, ಬದಲಾಗಿ ಮುಕ್ತಿಯ ಅನಂತ ಆಕಾಶದೆತ್ತರ ಹಾರಿಹೋಗಲು ವ್ಯಾಕುಲಗೊಂಡು ಚಡಪಡಿಸುತ್ತಿರುವ ಪಂಜರದ ಪಕ್ಷಿ ಇರುತ್ತಿತ್ತು. ಕಾಳೀಕೃಷ್ಣನು ಬತ್ತಿಯನ್ನು ಸಣ್ಣದಾಗಿಸಿ, ತನಗಿಷ್ಟವಾದ ಚಿಂತನೆಯಲ್ಲಿ ಕಾಲಕಳೆಯುತ್ತಿದ್ದ. ತಂದೆಯ ಗಾಡಿ ಶಬ್ದ ಕೇಳಿದೊಡನೆಯೇ ಮತ್ತೆ ಬತ್ತಿಯನ್ನು ಹಿರಿದಾಗಿಸುತ್ತಿದ್ದ. ಪುಸ್ತಕವಂತೂ ಮುಂದೆಯೇ ತೆಗೆದಿರುತ್ತಿತ್ತು; ಮಗ ಓದುತ್ತಿರುವುದನ್ನು ನೋಡಿ ತಂದೆ ಹೊರಟುಹೋಗುತ್ತಿದ್ದ.

ಕಾಳೀಕೃಷ್ಣನು ಮಠದಲ್ಲಿ ಕಳೆದ ಅದೇ ಅದ್ಭುತವಾದ ಒಂದೂವರೆ ತಿಂಗಳಿನ ಸ್ಮೃತಿ ಅವನ ಮನಸ್ಸಿನಂಗಳದಲ್ಲಿ ಸದಾ ಸುಳಿದಾಡುತ್ತಿತ್ತು. 'ಆ ಕೌಪೀನಧಾರಿ ನಿರ್ಲಿಪ್ತ ಸಂನ್ಯಾಸಿಗಳ ಜೀವನ ಅದೆಷ್ಟು ಅಪೂರ್ವ! ನನ್ನ ಸ್ಥಾನವೂ ಅಲ್ಲಿಯೇ ಏನು? ಅಥವಾ ಚಿರಕಾಲವೂ ಈ ಪಂಜರದಲ್ಲೇ ಬಂಧಿತನಾಗಿರಬೇಕೇ?' ಎಂದು ಚಿಂತಿಸುತ್ತಿದ್ದ. ಆಂತರ್ಯದ ಈ ದ್ವಂದ್ವವು ಮುಖದಲ್ಲಿ ಪ್ರತಿಬಿಂಬಿತವಾಗುತ್ತಿತ್ತು. ಮಗನನ್ನು ಗಮನಿಸುತ್ತಿದ್ದ ತ್ರೈಲೋಕ್ಯನು ಪತ್ನಿಯನ್ನು ಕೇಳಿದ, ''ಕಾಳಿಯ ಮನೋಭಾವದಲ್ಲಿ ಏನೋ ಬದಲಾವಣೆ ಕಂಡುಬರುತ್ತಿದೆಯಲ್ಲ , ಏನು ಸಮಾಚಾರ?'' ತಾಯಿಗೆ ಮಗನ ಮನಃಸ್ಥಿತಿಯ ಬಗ್ಗೆ ಸ್ವಲ್ಪ ತಿಳಿದಿತ್ತಾದರೂ ಮಗನನ್ನು ರಕ್ಷಿಸಲು, ''ನನಗೇನು ಗೊತ್ತು?'' ಎಂದು ಹೇಳಿ ನುಣುಚಿಕೊಂಡಳು. ಕೊನೆಗೊಂದು ದಿನ ತಂದೆಯೇ ಸ್ವತಃ ಮಗನನ್ನು ಕರೆದು ವಿಚಾರಿಸುತ್ತ, ''ಕಾಳಿ, ನಾನು ಗಮನಿಸಿದಂತೆ ಇತ್ತೀಚೆಗೆ ನಿನಗೆ ಓದುವುದರಲ್ಲಿ ಮೊದಲಿನಂತೆ ಮನಸ್ಸಿಲ್ಲ. ನೀನು ಮಾಡುತ್ತಿರುವುದಾದರೂ ಏನು? ನಿನ್ನ ಮನೋಗತವೇನು, ತಿಳಿಸು ನೋಡೋಣ'' ಎಂದರು.

ಶೈಶವದಿಂದಲೂ ಕಾಳೀಕೃಷ್ಣನು ತಂದೆಯ ನೀತಿ-ನಿಯಮಗಳನ್ನು ಭಯದಿಂದ ಪಾಲಿಸಿಕೊಂಡೇ ಬಂದಿದ್ದನು. ವಿಶೇಷವಾಗಿ ತ್ರೈಲೋಕ್ಯನಿಗೆ ಕೋಪ ಬಂದಾಗ ಮಾತ್ರ ಪ್ರಜ್ಞೆಯೇ ಇರುತ್ತಿರಲಿಲ್ಲ. ಆಗ ಬೈಗುಳವಂತೂ ಖಂಡಿತವೇ ಸರಿ, ಅದರೊಂದಿಗೆ ಬೆತ್ತದ ಬರೆಗಳು ಬಿದ್ದರೂ ಆಶ್ಚರ್ಯವೇನಿಲ್ಲ. ಈ ಸಂಕೋಚದ ಹುಡುಗನಾದರೋ ಈಗ ಜೀವನದ ಮುಖ್ಯ ಸಂಧಿಕಾಲಕ್ಕೆ ಬಂದಿದ್ದ. ಅದು ಭಯ-ಹಿಂಜರಿಕೆಗಳಿಗೆ ಸಮಯವೂ ಅಲ್ಲ. ಕಾಳೀಕೃಷ್ಣನು ತಲೆ ತಗ್ಗಿಸಿಕೊಂಡು ನಿಧಾನವಾಗಿ, ಆದರೆ ಸ್ಪಷ್ಟವಾಗಿ ತಂದೆಗೆ ಹೇಳಿದ: ''ಹೌದು, ನನಗೀಗ ಓದು-ಬರಹಗಳು ರುಚಿಸುತ್ತಿಲ್ಲ. ಭಗವಂತನ ಸಾಕ್ಷಾತ್ಕಾರಕ್ಕಾಗಿ ನಾನು ಹೆಚ್ಚು ಸಮಯವನ್ನು ಸಾಧನೆ, ಭಜನೆಯಲ್ಲಿ ಕಳೆಯುತ್ತಿದ್ದೇನೆ.''

ಈ ಬಾರಿ ತ್ರೈಲೋಕ್ಯನು ಕೋಪಗೊಳ್ಳಲಿಲ್ಲ, ಬದಲಿಗೆ ಗಂಭೀರವಾಗಿ, ''ನೋಡಪ್ಪ, ಭಗವಂತನ ಸಾಕ್ಷಾತ್ಕಾರ ಹಾಗೂ ಸಂಸಾರ ಎರಡೂ ಒಟ್ಟಿಗೆ ನಡೆಯುವುದಿಲ್ಲ. ನಿನಗೇನಾದರೂ ಪ್ರಪಂಚದಲ್ಲಿ ಉನ್ನತಿಯನ್ನು ಗಳಿಸಬೇಕೆಂದಿದ್ದರೆ ಮನಸ್ಸಿಟ್ಟು ಓದಬೇಕು; ಇಲ್ಲ , ಭಗವಂತನನ್ನೇ ಪಡೆಯಬೇಕೆಂದಿದ್ದರೆ ಪೂರ್ಣ ಮನಸ್ಸಿನಿಂದ ಸಾಧನೆ-ಭಜನೆ ಮಾಡಬೇಕು. ನೀನೀಗ ಯಾವುದನ್ನು ಮಾಡಬೇಕೆಂದಿರುವೆಯೋ ಸರಿಯಾಗಿ ನಿಶ್ಚಯಿಸು. ಚೆನ್ನಾಗಿ ಆಲೋಚಿಸಿ ನಿರ್ಧರಿಸು. ನಿನಗೆ ಮೂರು ದಿನಗಳ ಸಮಯ ಕೊಟ್ಟಿದ್ದೇನೆ'' ಎಂದು ಹೇಳಿದ.

ಇದು ತುಂಬ ಅನಿರೀಕ್ಷಿತವಾದ ಮಾತಾಗಿತ್ತು. ಏಕೆಂದರೆ ಕಾಳೀಕೃಷ್ಣನ ತಂದೆ ಅವನನ್ನು ವೈದ್ಯಕೀಯ ಕ್ಷೇತ್ರಕ್ಕೆ ತರಬೇಕೆಂಬ ಆಸೆಯನ್ನು ಇಷ್ಟು ದಿನವೂ ಪೋಷಿಸಿಕೊಂಡು ಬಂದಿದ್ದನು. ಇದು ಮಗನಿಗೂ ತಿಳಿದಿತ್ತು. ಆದರೆ ಜಗನ್ನಿಯಾಮಕನಾದ ಅಂತರ್ಯಾಮಿಯ ಇಚ್ಛೆಯಿಂದ ಅಸಾಧ್ಯವೂ ಸಾಧ್ಯವಾಗುತ್ತದೆ. ಹೀಗಾಗಿ ಕಾಳೀಕೃಷ್ಣನ ಹೃದಯ ಒಮ್ಮೆಲೆ ಭಗವಂತನನ್ನು ಕುರಿತು ಕೃತಜ್ಞತಾಭಾವ, ಆನಂದ ಮತ್ತು ವಿಸ್ಮಯಗಳಿಂದ ತುಂಬಿ ಹೋಯಿತು. ಕಾಳೀಕೃಷ್ಣ ಮೂರು ದಿನಗಳ ನಂತರ ತಂದೆಗೆ ತನ್ನ ನಿರ್ಧಾರವನ್ನು ಶಾಂತವಾಗಿಯೇ ತಿಳಿಸಿದ: ''ಭಗವಂತನನ್ನು ಪಡೆಯಲು ಪ್ರಯತ್ನಿಸುವೆ ಎಂದೇ ನಾನು ತೀರ್ಮಾನಿಸಿರುವೆ.'' ತಂದೆ ಸ್ವಲ್ಪ ಚಕಿತನಾಗಿ ಪ್ರಶ್ನಿಸಿದ, ''ಹಾಗಾದರೆ ನೀನು ಹೇಗೆ ಜೀವನವನ್ನು ಕಳೆಯುವೆ?'' ಮಗ ಉತ್ತರಿಸಿದ, ''ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರೊಂದಿಗಿದ್ದರೆ ಈ ಪಥದಲ್ಲಿ ಉತ್ತಮ ಮಾರ್ಗದರ್ಶನ ದೊರೆಯುತ್ತದೆ ಎಂದು ನನಗನಿಸುತ್ತದೆ.''

ಇದನ್ನು ಕೇಳಿದ ತಂದೆ, ಅದಕ್ಕೆ ತನ್ನ ಅಭ್ಯಂತರವೇನೂ ಇಲ್ಲವೆಂದು ತಿಳಿಸಿದ. ನಾಲ್ವರು ಗಂಡು ಮಕ್ಕಳಲ್ಲಿ ಒಬ್ಬ ಆಧ್ಯಾತ್ಮಿಕ ಜೀವನವನ್ನು ನಡೆಸಿದರೆ ಅದು ಸಂತೋಷದ ವಿಷಯವೇ ಅಲ್ಲವೆ? ಆದರೆ ಇದಕ್ಕೆ ಹೆತ್ತ ತಾಯಿಯ ಅನುಮತಿಯನ್ನು ಪಡೆಯುವುದು ಆವಶ್ಯಕವೆಂದು ಹೇಳಿದ.

ಶೈಶವದಲ್ಲಿ ತನ್ನ ಹಾಲನ್ನು ಕುಡಿಯದಿದ್ದ ಮಗುವನ್ನು ಮಾತೃವಾತ್ಸಲ್ಯವು ಮನೆಯಲ್ಲಿ ಬಂಧಿಸಿಡಲಾರದು ಎಂಬುದು ತಾಯಿಗೆ ಇಷ್ಟು ಹೊತ್ತಿಗಾಗಲೇ ತಿಳಿದಿತ್ತು. ಆಕೆ ಅವನಿಗೆ, ''ಮಗು, ನಾನು ನಿನ್ನ ಆಧ್ಯಾತ್ಮಿಕ ಪಥಕ್ಕೆ ಅಡ್ಡಿಯಾಗುವುದಿಲ್ಲ. ನೀನು ಏನೆಂದು ಸಂಕಲ್ಪಿಸಿಕೊಂಡಿದ್ದೀಯೋ ಹಾಗೆಯೇ ಮಾಡು. ಆದರೆ ಇನ್ನೂ ಮೂರು ದಿನ ನಮ್ಮೊಡನಿದ್ದು ನಂತರ ಹೊರಡುವಿಯಂತೆ'' ಎಂದು ಹೇಳಿದಳು.

ಕಾಳೀಕೃಷ್ಣ ಮುಂದಿನ ಮೂರು ದಿನಗಳನ್ನು ತನ್ನ ಪ್ರೀತಿಯ ತಮ್ಮ-ತಂಗಿಯರೊಂದಿಗೆ ಆನಂದದಿಂದ ಕಳೆದ. ಮೊದಲ ತಮ್ಮನಾದ ವಿಜಯನಿಗೆ ಹೇಳಿದ, ''ನಾನಿನ್ನು ಹೊರಟೆ. ತಾಯಿ-ತಂದೆ ಹಾಗೂ ಕುಟುಂಬದ ಎಲ್ಲರ ಯೋಗಕ್ಷೇಮ ನೋಡಿಕೊಳ್ಳುವ ಭಾರ ಈಗ ನಿನ್ನದೇ.'' ಚಿಕ್ಕವರಿಗೆ, ''ನೀವೆಲ್ಲರೂ ದಿನವೂ ಭಗವಂತನನ್ನು ಭಜಿಸಬೇಕು'' ಎಂದು ಹೇಳಿದ. ತನ್ನ ಬಟ್ಟೆಬರೆ ಹಾಗೂ ಬೇರೆ ಇನ್ನಿತರ ವಸ್ತುಗಳನ್ನೆಲ್ಲ ತಮ್ಮ-ತಂಗಿಯರಿಗೆ ಹಂಚಿದ. ತಾನು ಕೂಡಿಟ್ಟಿದ್ದ ೧೦೦ ರೂ.ಗಳನ್ನು ತಾಯಿಯ ಪಾದಗಳಲ್ಲಿ ಸಮರ್ಪಿಸಿದ. ನಾಲ್ಕನೇ ದಿನ ವಿದಾಯ ಹೇಳುವ ಸಮಯ ಬಂದೇಬಿಟ್ಟಿತು. ತಾಯಿಯ ಕಣ್ಣುಗಳಲ್ಲಿ ಒಂದೇ ಸಮನೆ ನೀರು. ಆದರೂ ಆಕೆ ಹೇಳಿದಳು, ''ನೋಡು, ನಿನ್ನನ್ನು ತಡೆಯಲು ಕಣ್ಣೀರು ಹರಿಸುತ್ತಿದ್ದೇನೆಂದು ತಿಳಿಯಬೇಡ. ಪ್ರಾಣಿಗಳಾದ ನಾಯಿ, ಬೆಕ್ಕನ್ನು ಕೆಲವು ವರ್ಷ ಸಾಕಿದರೂ ಅದರ ಬಗ್ಗೆ ಮಮತೆ ಉಂಟಾಗುತ್ತದೆ; ನೀನಾದರೋ ನನ್ನ ಕರುಳ ಕುಡಿ, ಹಿರಿಯ ಮಗ. ನಿನ್ನ ಮೇಲಿನ ಮಮತೆಯಿಂದ ಅಳುತ್ತಿರುವೆ; ಆದರೆ ಇದನ್ನು ನೋಡಿ ವಿಚಲಿತನಾಗಬೇಡ, ದೇವರು ನಿನ್ನ ಇಷ್ಟಾರ್ಥಗಳನ್ನು ಪೂರ್ಣಗೊಳಿಸಲಿ!'' ಎಂದು ಆಶೀರ್ವದಿಸಿದರು. ತಾವೇ ಸ್ವತಃ ಮಗನಿಗಾಗಿ ಬಟ್ಟೆಗೆ ಗೋಪಿ ಬಣ್ಣ ಹಾಕಿಟ್ಟಿದ್ದರು; ಅದನ್ನೀಗ ಕಾಳೀಕೃಷ್ಣನಿಗೆ ಕೊಟ್ಟರು (ಬ್ರಹ್ಮಚಾರಿಗಳು ಇಂತಹ ಹಳದಿ ಬಣ್ಣದ ವಸ್ತ್ರವನ್ನು ಉಪಯೋಗಿಸುತ್ತಾರೆ). ಮಠದಲ್ಲಿ ದೇವರಿಗೆ ಮತ್ತು ಸಂನ್ಯಾಸಿಗಳಿಗೆ ವಿವಿಧ ರೀತಿಯ ಸಿಹಿ ತಿಂಡಿಗಳನ್ನು ತಯಾರಿಸಿಕೊಟ್ಟರು. ಇಷ್ಟಲ್ಲದೆ ಅವುಗಳನ್ನು ತಲುಪಿಸಲು ಒಬ್ಬ ಆಳನ್ನೂ ಜೊತೆಗೆ ಕಳುಹಿಸಿದರು. ನಾರಿಕೇಲ್‌ಡಂಗಾದಿಂದ ಹೊರಟು, ಶ್ಯಾಮ್‌ಬಜಾರ್ ಮತ್ತು ಕಾಶೀಪುರವನ್ನು ದಾಟಿ, ಕಾಳೀಕೃಷ್ಣನು ವರಾಹನಗರದ ಮಠಕ್ಕೆ ಬಂದು ತಲುಪಿದನು. ಆಗ ಕಾಳೀಕೃಷ್ಣನ ವಯಸ್ಸು ಹದಿನೇಳೂ ಆಗಿರಲಿಲ್ಲ. ಅವನು ನೋಡಲು ಇನ್ನೂ ಚಿಕ್ಕವನಂತೆ ಕಾಣುತ್ತಿದ್ದ. ಗಡ್ಡ-ಮೀಸೆಯ ಚಿಹ್ನೆಗಳು ಇಪ್ಪತ್ತೊಂದರ ಮೊದಲು ಕಂಡು ಬಂದಿರಲಿಲ್ಲ.

ಇತ್ತ ಸಂನ್ಯಾಸಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ''ಭೇಷ್, ಭೇಷ್! ಒಳ್ಳೆಯದನ್ನೇ ಮಾಡಿದೆ. ಪರಮಾಶ್ಚರ್ಯ! ಎಲ್ಲವೂ ಅವನ ಕೃಪೆ'' ಎಂದು ಅವರೆಲ್ಲ ತಮ್ಮ ಆನಂದವನ್ನು ಪ್ರಕಟಪಡಿಸಿದರು.

೪

### ೧೮೯೧ರಲ್ಲಿ ವರಾಹನಗರ ಮಠದ ನೆನಪುಗಳು

*(ಸ್ವಾಮಿ ವಿರಜಾನಂದರ ಮಾತುಗಳಲ್ಲಿ)*

''ಮಠವು ಆಗ ವರಾಹನಗರದ 'ಪರಾಮಾಣಿಕ ಘಾಟ್' ರಸ್ತೆಯ ಒಂದು ಪಾಳುಬಿದ್ದ ಮನೆಯ ಮೇಲ್ಮಹಡಿಯ ಒಳಭಾಗದಲ್ಲಿತ್ತು. ಅದು ಟಾಕಿಯ ಜಮೀನ್ದಾರನೊಬ್ಬನ ಸೊತ್ತಾಗಿತ್ತು. ರಸ್ತೆಯ ಕಡೆಗಿದ್ದ ಬಾಗಿಲಿಂದ ಪ್ರವೇಶಿಸಿದರೆ ಚಿಕ್ಕ ಅಂಗಳ ಸಿಗುತ್ತಿತ್ತು. ಅದನ್ನು ದಾಟಿ, ಮೆಟ್ಟಿಲು ಹತ್ತಿದರೆ ಮರದ ಕಟಕಟೆ ಹಾಗೂ ಕಂಬಗಳಿಂದ ಕೂಡಿದ ವರಾಂಡಾ. ಇದರ ಎದುರು



ವರಾಹನಗರ ಮಠ - ಹಳೆಯ ಚಿತ್ರ

ದಕ್ಷಿಣಕ್ಕಿರುವ ದೊಡ್ಡ ಕೊಠಡಿಯನ್ನು ನಾನು ಹೋಗುವ ಮೊದಲು ಬಾಡಿಗೆಗೆ ನೀಡಲಾಗಿತ್ತು. ಅನಂತರ ಇದು ಖಾಲಿ ಯಾಗಿಯೇ ಇರುತ್ತಿತ್ತು. ಹೊರಗಿನ ರಸ್ತೆಯಿಂದ ಒಳಭಾಗದ ಕೊಠಡಿಗಳು ಕಾಣುತ್ತಿರಲಿಲ್ಲ; ಹೀಗಾಗಿ ಅದು ಏಕಾಂತವಾಗಿತ್ತು. ಈಗ ಹೊರಗಿನ ಭಾಗವನ್ನು ಹೊರತುಪಡಿಸಿ ಇಡೀ ಮನೆ ಬಿದ್ದು ಹೋಗಿದೆ. ಮಠದ ಒಳಭಾಗದ ಫೋಟೋ ಸಹ ಸಿಗುವುದಿಲ್ಲ.

''ಮಠದ ಹಿತ್ತಲಲ್ಲಿ ಸೊಪ್ಪಿನ ತೋಟ, ನುಗ್ಗೆ ಮರ, ಒಂದು ಬಿಲ್ವಮರ ಹಾಗೂ ಕೆಲವು ತೆಂಗು ಮತ್ತು ಮಾವಿನ ಮರಗಳಿದ್ದವು. ಒಂದು ಪುಷ್ಕರಣಿಯೂ ಇತ್ತು. ತೋಟದಲ್ಲಿ ಸೊಪ್ಪು-ತರಕಾರಿ ಹೆಚ್ಚಾಗಿ ಬೆಳೆಯುತ್ತಿರಲಿಲ್ಲ. ದಂಟಿನ ಸೊಪ್ಪು, ಎರಡು-ಮೂರು ಕುಂಬಳಕಾಯಿ, ಸೌತೆಕಾಯಿ ಹಾಗೂ ಬಾಳೆ ಇವು ಬೆಳೆಯುತ್ತಿದ್ದವು ಅಷ್ಟೆ. ಒಬ್ಬ ಒರಿಯಾ (ಒರಿಸ್ಸಾದ) ಮಾಲಿ ಇದ್ದ. ಅವನನ್ನು ಕೇಲೋ ಎಂದು ಕರೆಯುತ್ತಿದ್ದರು. ತರಕಾರಿ ಇಲ್ಲದಾಗ ಶಶಿ ಮಹಾರಾಜರು ತೋಟಕ್ಕೆ ನುಗ್ಗಿ ದಂಟು, ಕುಂಬಳದ ಎಲೆ, ನುಗ್ಗೆ ಕಾಯಿ ಅಥವಾ ಎಲೆ, ಹೂ - ಹೀಗೆ ಸಿಕ್ಕಿದ್ದನ್ನು ನಿಮಿಷಾರ್ಧದಲ್ಲಿ ಈಳಿಗೆಮಣೆಯಿಂದ ಕತ್ತರಿಸಿ ತರುತ್ತಿದ್ದರು. ಇದನ್ನು ನೋಡಿದ ಕೇಲೋ ಮಾಲಿ ಒರಿಯಾ ಭಾಷೆಯಲ್ಲಿ ಕೂಗಾಡುತ್ತಿದ್ದ, ''ಅರೇ ಏನ್ಮಾಡ್ದೆ, ಏನ್ಮಾಡ್ದೆ, ಅದನ್ನೆಲ್ಲಾ ತಿಂದು ಮುಗಿಸ್ತೀಯಾ; ತೊಗೋ ಬೇಡ, ತೊಗೋಬೇಡ!'' ಎನ್ನುತ್ತಾ ಅಟ್ಟಿಸಿಕೊಂಡು ಬರುತ್ತಿದ್ದ, ಕೆಲವೊಮ್ಮೆ ಬೈದು ಅರಚುತ್ತಿದ್ದ. ಆದರೆ ಶಶಿ ಮಹಾರಾಜರು ಕಿಂಚಿತ್ತೂ ವಿಚಲಿತರಾಗದೆ, ತಮ್ಮದೇ ಗುಂಗಿನಲ್ಲಿ ಕೆಲಸ ಮುಗಿಸಿ ಬಂದುಬಿಡುತ್ತಿದ್ದರು. ಈ ಸನ್ನಿವೇಶ ಎಲ್ಲರಿಗೂ ವಿನೋದ ತರುತ್ತಿತ್ತು. ಅದೇನೇ ಇರಲಿ, ಮಠದ ಎಲ್ಲರ ಬಗ್ಗೆ ಕೇಲೋಗೆ ಬಹಳ ಪ್ರೀತಿಯಿತ್ತು. ಸಾಧ್ಯವಾದಾಗಲೆಲ್ಲಾ ಅವನಿಗೂ ಪ್ರಸಾದ-ಸಿಹಿ ತಿಂಡಿಗಳನ್ನು ಕೊಡಲಾಗುತ್ತಿತ್ತು.

*(ಮುಂದುವರಿಯುವುದು)*

ಪ್ರತಿಯೊಬ್ಬರೂ — ಹೆಂಗಸಾಗಲಿ, ಗಂಡಸಾಗಲಿ ಸ್ವಾತಂತ್ರ್ಯದಿಂದ ಕೂಡಿದ ಜೀವನಕ್ಕೆ ಯಾವುದಾದರೊಂದು ಬಗೆಯ ಶಿಕ್ಷಣ, ವೃತ್ತಿ, ಕೈಗಾರಿಕೆ ಇವನ್ನು ಕಲಿತಿರುವುದು ಅತ್ಯಾವಶ್ಯಕ. ಪರಾಧೀನತೆ ತಿರಸ್ಕರಣೀಯ ಸ್ಥಿತಿ. ಅದು ಬಾಳನ್ನು ದುಸ್ಸಹನೀಯವನ್ನಾಗಿ ಮಾಡುವುದು. ಅಂತಹ ಪರಿಸ್ಥಿತಿಯಲ್ಲಿ ನಾವೆಷ್ಟೇ ಮನಃಪೂರ್ವಕವಾಗಿ ಇಚ್ಛಿಸಿದರೂ, ದೇವರು ಮತ್ತು ಧರ್ಮಚಿಂತನೆಯನ್ನು ಮಾಡಲು ಅಸಾಧ್ಯ.

ಐಹಿಕ ಸುಖಾಸಕ್ತರಾದ ಜನರೂ ಶ್ರದ್ಧೆ, ನಿಶ್ಚಲತೆ, ದೀರ್ಘಪ್ರಯತ್ನಗಳಿಂದ ಗುರುವಿನ ಉಪದೇಶದಂತೆ ನಡೆದರೆ, ಅತ್ಯುನ್ನತ ಗುರಿಯನ್ನು ಸೇರಬಹುದು. ಅನಂತರ ಜೀವನ ಸುಖ ಸಂತೋಷಗಳಿಂದ ಕೂಡಿರುವುದು.

**ಸ್ವಾಮಿ ವಿರಜಾನಂದ**

# ಚೈತನ್ಯದೇವನ ಭಕ್ತಿಮಾರ್ಗ

ಆಂಗ್ಲಮೂಲ : **ಸ್ವಾಮಿ ಅಶೋಕಾನಂದ**

ಅನುವಾದ : **ಡಾ. ಇ. ವಸಂತಕುಮಾರ್**

ಸ್ವಾಮಿ ಅಶೋಕಾನಂದರು (೧೮೯೩–೧೯೬೯) ರಾಮಕೃಷ್ಣ ಮಹಾಸಂಘದಲ್ಲಿ ಅತ್ಯಂತ ಗೌರವಕ್ಕೆ ಭಾಜನರಾದ ಸಂನ್ಯಾಸಿಗಳಾಗಿದ್ದರು. ಸಂಘದ ಎರಡನೆಯ ಅಧ್ಯಕ್ಷರಾಗಿದ್ದ ಸ್ವಾಮಿ ಶಿವಾನಂದರಿಂದ ಸಂನ್ಯಾಸದೀಕ್ಷೆ ಪಡೆದ ಅವರು, ೧೯೨೬–೧೯೩೧ರ ಅವಧಿಯಲ್ಲಿ **'ಪ್ರಬುದ್ಧ ಭಾರತ'** ಮಾಸ ಪತ್ರಿಕೆಯ ಸಂಪಾದಕರಾಗಿದ್ದರು. ಅವರು ಕಾಲವಾಗುವವರೆಗೆ, ಅಮೆರಿಕಾದ ಸಾನ್‌ಫ್ರಾನ್ಸಿಸ್ಕೋ ಕೇಂದ್ರದ ಮುಖ್ಯಸ್ಥರಾಗಿದ್ದರು. ಪ್ರಭಾವಶಾಲಿ ಲೇಖಕರು ಮತ್ತು ಪ್ರವಚನಕಾರರಾಗಿದ್ದ ಅವರ ಈ ಲೇಖನವನ್ನು ಅಮೆರಿಕಾದ ಭಕ್ತರಿಗೆ ಕೊಟ್ಟ ಪ್ರವಚನಗಳಿಂದ ಆರಿಸಲಾಗಿದೆ. **'ವೇದಾಂತ ಕೇಸರಿ'** ಆಂಗ್ಲ ಮಾಸಪತ್ರಿಕೆಯಲ್ಲಿ ಡಿಸೆಂಬರ್ ೨೦೧೫ರ ವಿಶೇಷ ಸಂಚಿಕೆಯಲ್ಲಿ ಪ್ರಕಟವಾಗಿದ್ದ ಈ ಲೇಖನದ ಅನುವಾದಕರು ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ.



### ಭಾಗ ೧

### ಭಕ್ತಿ ಎಂದರೆ ಭಗವಂತನ ಬಯಕೆ

ನಿಷ್ಠಾವಂತ ಭಕ್ತರ ಕಡೆ ನೋಡಿದಾಗ, ಅಂತಹ ವ್ಯಕ್ತಿಗಳು ತಮ್ಮ ಮನಸ್ಸಿನಲ್ಲಿ ಏನನ್ನು ಅರಸುತ್ತಿರುವರು ಎಂದು ನಾವು ಕೇಳುತ್ತೇವೆ. ಅವರು ಹಗಲಿರುಳೂ ಭಗವಂತನನ್ನೇ ಅರಸುವರು. ಅವನ ಹೆಸರನ್ನು ಜಪಿಸುವರು, ಅವನ ರೂಪವನ್ನು ನೋಡುವರು. ಅವರು ಕ್ರಿಸ್ತನ ಭಕ್ತನಾದರೆ ಅವನ ಚಿತ್ರವನ್ನು ನೋಡುವರು. ಮತ್ತೊಬ್ಬ ವ್ಯಕ್ತಿಯ ಪ್ರೀತಿಗೆ ಒಳಗಾದ ವ್ಯಕ್ತಿಯಲ್ಲಿಯೂ ಅದೇ ಲಕ್ಷಣಗಳು ಕಂಡುಬರುತ್ತವೆ. ಆತ ಪ್ರಿಯತಮೆಯ ಚಿತ್ರವನ್ನು ಇಟ್ಟುಕೊಳ್ಳ ಬಯಸುತ್ತಾನೆ, ಅದನ್ನು ಪದೇಪದೇ ನೋಡುತ್ತ ಅದರಲ್ಲಿ ಸಹಸ್ರಾರು ಬಗೆಯ ಸೌಂದರ್ಯವನ್ನು ಕಾಣುವನು; ಪ್ರಿಯತಮೆಯ ಚಿತ್ರವನ್ನು ಬರೆಯಲು ಇಚ್ಛಿಸುವನು. ಆದರೆ ಸಹಜವಾಗಿ, ಭಗವಂತನಿಗೆ ಆಕಾರವಿದೆಯೆಂದು ನಂಬಿದರೆ ಮಾತ್ರ, ಅಥವಾ ಭಗವಂತನ ಅವತಾರವೊಂದರಲ್ಲಿ ನಿಷ್ಠಾವಂತ ಭಕ್ತರಾಗಿದ್ದರೆ ಮಾತ್ರ ನೀವು ಅವನ ಚಿತ್ರವನ್ನು ಬಿಡಿಸಲು ಸಾಧ್ಯ. ಇದು ಭಕ್ತಿಯ ಒಂದು ಚಿಹ್ನೆ ಮತ್ತು ಭಕ್ತಿಯ ಒಂದು ಸಾಧನೆ. ಆದರೆ ಇದು ಬಹಳ ಪರಿಣಾಮಕಾರಿಯಾದ ಅಭ್ಯಾಸ ಎಂದು ಹೇಳುತ್ತಾರೆ.

ಭಕ್ತರು ಭಗವಂತನಿಗಾಗಿ ಹಾಡುವರು, ನರ್ತಿಸುವರು, ಅವನ ವಿಗ್ರಹವನ್ನು ಅಲಂಕರಿಸುವರು. ಒಂದು ವಿಗ್ರಹವನ್ನು, ಚಿತ್ರವನ್ನು ಅಲಂಕರಿಸುವುದರಲ್ಲಿ ಏನು ಅರ್ಥವಿದೆ ಎಂದು ನೀವು ಕೇಳಬಹುದು. ಪ್ರೀತಿ ಎಂಬುದು ಒಂದು ಬಗೆಯ ಹುಚ್ಚು , ಅಲ್ಲವೆ? ತಾಯಿಯಾದವಳು ತನ್ನ ಮಗುವಿನ ಚಿತ್ರವನ್ನು ಕೈಗೆ ತೆಗೆದುಕೊಂಡು ಅದಕ್ಕೆ ಮುತ್ತಿಡುವಳು. ಒಂದು ತುಂಡು ಕಾಗದಕ್ಕೆ ಮುತ್ತಿಡುವುದರಲ್ಲಿ ಏನು ಅರ್ಥವಿದೆ? ತಾಯಿ ಹಾಗೆ ಯೋಚಿಸುವಳೆ? ಇಲ್ಲ. ಒಂದು ಚೂರು ಕಾಗದವನ್ನು ಮುತ್ತಿಡುತ್ತಿರುವೆ ಎಂದು ಅವಳು ಯೋಚಿಸಿದ್ದರೆ, ಅವಳು ದಿಗ್ಭ್ರಾಂತಳಾಗುತ್ತಿದ್ದಳು. ಅವಳು ತನ್ನ ಮಗುವನ್ನು ಚುಂಬಿಸುತ್ತಿರುವೆನೆಂದೇ ಭಾವಿಸುತ್ತಾಳೆ. ಆದರೆ ಇಲ್ಲಿ ನೀವು ಒಂದು

ವಿಷಯವನ್ನು ನೆನಪಿನಲ್ಲಿಡಬೇಕು. ಅದರಿಂದ ಒಂದು ವ್ಯತ್ಯಾಸ ತಿಳಿಯುವುದು. ತಾಯಿಯು ತಾನು ಒಂದು ಕಾಗದಕ್ಕೆ ಮುತ್ತಿಡುತ್ತಿರುವೆನೆಂಬುದನ್ನು ಒಪ್ಪಿಕೊಳ್ಳಲಾರಳು; ಆದರೂ ಅವಳು ಮುತ್ತಿಡುತ್ತಿರುವುದು ಮಗುವನ್ನಲ್ಲ, ಅದರ ಚಿತ್ರವನ್ನು ಎಂದು ಅವಳು ಒಪ್ಪಿಕೊಳ್ಳುವಳು. ಆದರೆ, ದೇವರ ವಿಷಯದಲ್ಲಿ ಇದು ನಿಜವೆಂದಲ್ಲ. ಏಕೆ? ಏಕೆಂದರೆ, ಮಗು ಆ ಚಿತ್ರವನ್ನು ಪ್ರವೇಶಿಸಲಾರದು; ಮಗು ಐದು ಮೈಲಿ ದೂರದಲ್ಲಿರಬಹುದು, ಆ ಚಿತ್ರವನ್ನು ಪ್ರವೇಶಿಸಲಾರದು. ಆದರೆ, ಭಕ್ತ ದೇವರ ಚಿತ್ರ ಅಥವಾ ಪ್ರತಿಮೆಗೆ ಮಾಲೆಯನ್ನು ಹಾಕಿದರೆ, ದೇವರು ಎಲ್ಲೆಡೆ ಇರುವುದರಿಂದ, ಆ ಪ್ರತಿಮೆಯನ್ನು ಪ್ರವೇಶಿಸಿ ಆ ಹಾರವನ್ನು ಸ್ವೀಕರಿಸುವನು. ಅವನು ಮಹಾ ಆಸೆಬುರುಕ. ಅವನು ಆ ಮಾಲೆಯ ಸುಖವನ್ನು ಅನುಭವಿಸುವುದಕ್ಕೆ ಅಲ್ಲಿಗೆ ಬರುತ್ತಾನೆ. ನೀವು ವಿಗ್ರಹದ ಮುಂದೆ ಹಾಡುತ್ತಿರುವಿರಾ? ಅವನು ಬಂದು ಆ ವಿಗ್ರಹದಲ್ಲಿ ಕುಳಿತು, ಮೈಯೆಲ್ಲಾ ಕಿವಿಯಾಗಿ ನಿಮ್ಮ ಹಾಡನ್ನು ಕೇಳಿಸಿಕೊಳ್ಳುತ್ತಾನೆ. ಅವನು ಯಾವುದನ್ನೂ ತಪ್ಪಿಸಿಕೊಳ್ಳಲು ಇಚ್ಛಿಸುವುದಿಲ್ಲ. ನಮಗೋ, ಇದು ಎಂತಹ ಅದ್ಭುತ!

ಪ್ರೀತಿಯ ವಸ್ತುವಾದ ಭಗವಂತನು ಅತ್ಯಲ್ಪ ಪ್ರೇಮದ ಅಭಿವ್ಯಕ್ತಿಗೂ ಸ್ಪಂದಿಸುವನು ಎಂದು ಭಕ್ತಿಮಾರ್ಗದ ಆಚಾರ್ಯರೆಲ್ಲರೂ ಹೇಳಿದ್ದಾರೆ. ಅದನ್ನು ಸತ್ಯವೆಂದು ನೀವು ಅಂಗೀಕರಿಸಬೇಕು. ಹೇಗೆ ಜ್ಞಾನಿಗಳು, ತತ್ತ್ವಜ್ಞಾನಿಗಳು ಪರಮಾತ್ಮನು ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ಸಮವಾಗಿ ಇರುವನೆಂದು ಹೇಳುತ್ತಾರೋ ಹಾಗೆ, ಭಕ್ತರು ತಮ್ಮ ಪ್ರೀತಿಯ ವಸ್ತುವಾದ ಭಗವಂತ ಎಲ್ಲೆಡೆ ಇರುವನೆಂದು ಹೇಳುತ್ತಾರೆ. ಎಲ್ಲಿ ಭಗವಂತನದೇ ಆದ, ಕ್ಷುದ್ರಜೀವಿಗಳ ಹೃದಯದಿಂದ ಅತ್ಯಲ್ಪ ಪ್ರಮಾಣದ ಪ್ರೀತಿ ಹೊಮ್ಮುವುದೋ ಅಲ್ಲಿ ಅವನು ಅದಕ್ಕೆ ಸಮಾನವಾಗಿ ಸ್ಪಂದಿಸುವನು.

ಆದ್ದರಿಂದ ಭಕ್ತನಾದವನು ಮಧ್ಯಮ ಸ್ಥಿತಿಯಲ್ಲಿ ವಿವಿಧ ರೀತಿಗಳಲ್ಲಿ ಭಗವಂತನನ್ನು ಅನುಭವಿಸಲು ಇಚ್ಛಿಸುತ್ತಾನೆ. ಅವನು ಭಗವಂತನನ್ನು ಪ್ರೀತಿಸಬಯಸುತ್ತಾನೆ. ನಂತರ ಆಗಾಗ್ಗೆ ತನ್ನ ಇಂದ್ರಿಯಗಳನ್ನು ಒಳಸೆಳೆದು, ಪ್ರಶಾಂತ ಸ್ಥಿತಿಯಲ್ಲಿ ಭಗವಂತನ ಸಾನ್ನಿಧ್ಯವನ್ನು ಅನುಭವಿಸುತ್ತಾ ಅವನ ಮೇಲೆ ಧ್ಯಾನಿಸುತ್ತಾನೆ. ಮಿತ್ರರೆ, ಭಕ್ತಿಮಾರ್ಗದಲ್ಲಿ ಬಹುತೇಕ ಎಲ್ಲ ಆಚಾರ್ಯರೂ ಭಗವಂತನ ಅಸ್ತಿತ್ವದ ಬಗ್ಗೆ ಒಂದು ಅಂಶವನ್ನು ಒತ್ತಿ ಹೇಳಿದ್ದಾರೆ. ಅದೇನೆಂದರೆ, ಭಗವಂತನು ಪ್ರತಿ ಜೀವಿಯ ಹೃದಯದಲ್ಲಿಯೂ ವಾಸಿಸುತ್ತಾನೆ. ಈ ಮಾರ್ಗದಲ್ಲಿ ಅದು ಪ್ರಮುಖ ಅಂಶಗಳಲ್ಲಿ ಒಂದು. ಭಕ್ತನು ಭಗವಂತನ ಮೇಲೆ ಧ್ಯಾನಿಸಲು, ಹಾಗೂ ಅವನ ಇರುವಿಕೆಯನ್ನು ತನ್ನ ಹೃದಯದಲ್ಲಿಯೇ ತನ್ನ ಆತ್ಮದ ಆತ್ಮದಂತೆ ಅನುಭವಿಸಲು ಬಹಳ ಇಷ್ಟಪಡುತ್ತಾನೆ ಎಂಬುದು ತಿಳಿದ ವಿಷಯವಾಗಿದೆ. ಅವನನ್ನು ಮತ್ತೆಲ್ಲಿ ಅನುಭವಿಸಲು ಸಾಧ್ಯ, ಮತ್ತೆಲ್ಲಿ ಆಲಿಂಗಿಸಲು ಸಾಧ್ಯ? ಎಲ್ಲಿ ಸಾಧ್ಯ, ನೀವು ಹೇಳಿ! 'ಏಕೆ, ಹೊರಗಡೆ' ಎಂದು ನೀವು ಹೇಳುವುದಾದರೆ, ಭಕ್ತ ದೇವರನ್ನು ಹೊರಗೆ ಕಂಡು ಅವನನ್ನು ಆಲಿಂಗಿಸಿದರೂ, ಆ ಕ್ರಿಯೆ ನಡೆಯುವುದು ಅವನ ಒಳಗೆ, ಏಕೆಂದರೆ ಅಲ್ಲಿ 'ಹೊರಗಡೆ' ಎಂಬುದಿಲ್ಲ. ಎಲ್ಲವೂ ಅಂತಶ್ಚಿತ್ತದಲ್ಲಿ, ಆತ್ಮನಲ್ಲಿ ಇದೆ. 'ಪ್ರಪಂಚ ನಮ್ಮ ಹೊರಗಡೆ ಇದೆ' – ಈ ಅಪಭ್ರಂಶವನ್ನು ಎಂದೂ ನಂಬಬೇಡಿ! ಪ್ರಪಂಚ ನಮ್ಮ ಚಿತ್ತದಲ್ಲಿದೆ. ಮತ್ತೆಲ್ಲಿ ಅದು ಇರುವುದು? 'ನಾನು ಒಂದು ಮರವನ್ನು ನೋಡುತ್ತಿದ್ದೇನೆ' ಎಂದು ನೀವು ಹೇಳಿದರೆ, 'ನನ್ನ ಚಿತ್ತದಲ್ಲಿ ಒಂದು ಮರವಿದೆ' ಎಂದು ಹೇಳುತ್ತಿರುವಿರಷ್ಟೆ. ನೀವು ಇನ್ನೇನು ಹೇಳುವಿರಿ? ಅದು ನಿಮ್ಮ ಚಿತ್ತದಲ್ಲಿ ಇದ್ದಾಗ ಮಾತ್ರವೇ ಅದರ ಅರಿವು ನಿಮಗೆ ಉಂಟಾಗುವುದು. 'ನನ್ನ ಚಿತ್ತದಿಂದ ಹೊರಗಡೆ ಒಂದು ಮರವಿದೆ' ಎಂದು ಹೇಳುವುದರಲ್ಲಿ ಯಾವ ಅರ್ಥವೂ ಇಲ್ಲ. 'ದೇವರು ನನ್ನ ಚಿತ್ತದಿಂದ ಹೊರಗಡೆ ಇರುವನು' ಎಂಬುದೂ ಅಂತೆಯೇ ಅಸತ್ಯ. ನೀವು ಭಕ್ತರಾಗಿರಿ, ಅಥವಾ ಜ್ಞಾನಿಯಾಗಿರಿ – ನಡೆಯುವುದೆಲ್ಲವೂ ನಿಮ್ಮ ಆತ್ಮದಲ್ಲಿ. ಒಬ್ಬ ವ್ಯಕ್ತಿ, ತಾನು ಪ್ರೀತಿಸುವ ವಸ್ತುವನ್ನು ಆಲಿಂಗಿಸಲು ಇಚ್ಛಿಸುವುದು ಏಕೆ? ಆತ ಮತ್ತೊಂದು ವ್ಯಕ್ತಿಯನ್ನು ತನ್ನ ಆತ್ಮದಲ್ಲಿ ಇಟ್ಟುಕೊಳ್ಳಲು ಬಯಸುವನು. ಅದನ್ನೇ ಅವನು ಮಾಡುತ್ತಿರುವನು; ಆದರೆ ಅವನು ತಪ್ಪು ವಿಧಾನವನ್ನು ಅನುಸರಿಸುತ್ತಿರುವನು ಅಷ್ಟೆ. ತಾಯಿ ಮಗುವನ್ನು ತನ್ನ ಹೃದಯಕ್ಕೆ ಒತ್ತಿಕೊಳ್ಳುವಳು; ತನ್ನ ಹೃದಯಾಂತರಾಳದಲ್ಲಿ ತೃಪ್ತಿಯನ್ನು ಅನುಭವಿಸುವಳು. ಪ್ರತಿಕ್ರಿಯೆ ನಡೆಯುವುದು ಅಲ್ಲಿ. ಭಕ್ತನು ಭಗವಂತನ ಇರವನ್ನು ತನ್ನ ಹೃದಯದಲ್ಲಿಯೇ ಅನುಭವಿಸಲು ಬಯಸುವನು; ಆದುದರಿಂದ ತಾನು ಕಾಲಕಾಲಕ್ಕೆ ಅವನನ್ನು ಅಲ್ಲಿ ವೈಭವದಿಂದ ಕಂಗೊಳಿಸುತ್ತಿರುವಂತೆ ಧ್ಯಾನಿಸುವನು. ಭಗವಂತನನ್ನು ಅಲ್ಲಿ ಕಾಣದಿದ್ದರೆ, ಹೃದಯ ಒಡೆದುಹೋದಂತೆ ಭಯಭೀತನಾಗುವನು.

ಕೆಲವು ವೇಳೆ ನಾನು ಭಾರತದ ಸಂತಶ್ರೇಷ್ಠನೊಬ್ಬನ ಶ್ಲೋಕವೊಂದನ್ನು ಉದಾಹರಿಸುತ್ತೇನೆ. ಆತನು (ಶ್ರೀಚೈತನ್ಯ) ಸಂಸ್ಕೃತದಲ್ಲಿ ಮಹಾಪಂಡಿತನಾಗಿದ್ದನು. ಅವನ ಶ್ಲೋಕಗಳು ಎಷ್ಟು ಅರ್ಥಗರ್ಭಿತವಾಗಿರುವವೆಂದರೆ, ಅವು ವೇದಗಳಷ್ಟೇ ಅಧಿಕಾರವಾಣಿಯಿಂದ ಕೂಡಿರುವವೆಂದು ಪರಿಗಣಿಸಲಾಗಿವೆ. ಅವನ ಒಂದು ಹಾಡಿನಲ್ಲಿ ಭಕ್ತಿಯ ಅವಸ್ಥೆಯನ್ನು ವಿವರಿಸಿದ್ದಾನೆ:

**ಯುಗಾಯಿತಂ ನಿಮೇಷೇಣ ಚಕ್ಷುಷಾ ಪ್ರಾವೃಷಾಯಿತಮ್।**
**ಶೂನ್ಯಾಯಿತಂ ಜಗತ್ ಸರ್ವಂ ಗೋವಿಂದವಿರಹೇಣ ಮೇ ॥**

'ನಾನು ಭಗವಂತನಿಂದ ಬೇರೆಯಾದಾಗ, ಕ್ಷಣವೊಂದು ಯುಗವಾದಂತೆ ತೋರುವುದು, ಮಳೆಯ ಮೋಡ ಧಾರಾಕಾರವಾಗಿ ಮಳೆಯನ್ನು ಸುರಿಸುವಂತೆ ನನ್ನ ಕಣ್ಣುಗಳು ಅಶ್ರುಜಲವನ್ನು ಸುರಿಸಲಾರಂಭಿಸುವುವು, ಎಲ್ಲವೂ ಕಳೆದು ಹೋದಂತೆ ಇಡೀ ಪ್ರಪಂಚವೇ ಶೂನ್ಯವಾದಂತೆ ಕಾಣುವುದು.' ಅಂತಹ ಸ್ಥಿತಿ ಪ್ರಾಪ್ತವಾದಾಗ ಪ್ರಖರ ಸೂರ್ಯನೂ ಕತ್ತಲಿನಿಂದ ಆವೃತವಾದಂತಾಗಿ, ಭೂಮಿಯಿಂದ ಬೆಳಕು ಮಾಯವಾದಂತೆ ಕಾಣುವುದು ಎಂದು ನಾನು ಸೇರಿಸುತ್ತೇನೆ. ಅಂತಹ ದುಃಖವು ಭಕ್ತನ ಹೃದಯವನ್ನು ಆವರಿಸುವುದು. ಕೆಲವು ವೇಳೆ ಅವನು ತನ್ನ ಹೃದಯವೇದನೆಯ

ಅಳಲನ್ನು ತೋಡಿಕೊಳ್ಳುವುದನ್ನು ನೀವು ನೋಡುವಿರಿ. ನಂತರ ಅವನಿಗೆ ಶಾಂತಿ ಬರುವುದು, ಅವನ ಮುಖ ಆನಂದದಿಂದ ಬೆಳಗುವುದು.

ಇದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಒಂದೇ ಒಂದು ಮಾರ್ಗವಿದೆ: ಮಾನವ ಪ್ರೀತಿಯ ಮೂಲಕ. ಅಲ್ಲದಿದ್ದರೆ ಅದೊಂದು ವಿಚಿತ್ರ ಅವಸ್ಥೆಯಂತೆ ತೋರುವುದು. ಆದರೆ, ನಿಮಗೆ ತಿಳಿದಿದೆ, ನಾವು ನಿಜವಾಗಿಯೂ ಪ್ರೀತಿಸಿದರೆ, ಮಾನವನ ದೃಷ್ಟಿಯಿಂದ ಈ ಎಲ್ಲ ಚಿಹ್ನೆಗಳೂ ಕಾಣುವುವು. ವ್ಯತ್ಯಾಸವೇನೆಂದರೆ, ಇಂದ್ರಿಯ ಪ್ರಪಂಚದಲ್ಲಿ ಸಾಂತತೆಯ ದೃಷ್ಟಿಯಿಂದ, ಇವೆಲ್ಲವೂ ವಿಫಲವಾಗುತ್ತವೆ. ಆಧ್ಯಾತ್ಮಿಕ ಪ್ರೀತಿ ನಿಮ್ಮನ್ನು ಇಂದ್ರಿಯವಲಯದಿಂದ ಹೊರಗೆ ಕೊಂಡೊಯ್ಯುವುದು. ನೀವು ವಿಫಲಗೊಳ್ಳುವುದರ ಬದಲಾಗಿ ಅದು ನಿಮ್ಮನ್ನು ಸಫಲತೆಗೆ ಕೊಂಡೊಯ್ಯುವುದು; ನೀವು ನಿಮ್ಮ ಪ್ರೀತಿಯ ವಸ್ತುವಿನೊಂದಿಗೆ ಶಾಶ್ವತವಾಗಿ ಸೇರಿಕೊಳ್ಳುವಿರಿ. ಇದೇ ವ್ಯತ್ಯಾಸ, ಆದರೆ ಚಿಹ್ನೆಗಳೆಲ್ಲಾ ಒಂದೇ.

ನಿಮ್ಮಲ್ಲಿ ಕೆಲವರು ಈ ಪ್ರಶ್ನೆಯನ್ನು ಕೇಳಬಹುದು: 'ಅದರಿಂದ ನನಗೇನು ಒಳ್ಳೆಯದಾಗುವುದು?' ಪ್ರೀತಿಯಿಂದ ಯಾರಿಗೆ ಏನು ಒಳ್ಳೆಯದಾಗುವುದು? ಪ್ರೀತಿಸುವವರನ್ನು ಕೇಳಿ ನೋಡಿ. ಅವರು ನಿಮ್ಮೆಡೆ ಮರುಕದಿಂದ ನೋಡುವರು. ಬಹುತೇಕ ಹಣ, ಕೀರ್ತಿ ಅಥವಾ ಜ್ಞಾನವನ್ನು ಗಳಿಸುವುದರಿಂದ ಮಾನವ ಕೃತಾರ್ಥನಾಗುವುದಿಲ್ಲ, ಆದರೆ ಅವನು ಕನಿಷ್ಠ ಪಕ್ಷ ಒಂದು ವ್ಯಕ್ತಿಯೊಡನೆಯಾದರೂ ಐಕ್ಯತೆಯ ಭಾವವನ್ನು ಅನುಭವಿಸಿದರೆ ಕೃತಾರ್ಥನಾಗುವನು. ಅದು ಪ್ರೀತಿ. ಪ್ರತ್ಯೇಕತೆ ಮರಣ; ಐಕ್ಯತೆ ಜೀವನ. ಆದುದರಿಂದಲೇ ಮಾನವ ಸಂಘಜೀವಿ. ಪ್ರತಿಯೊಬ್ಬರೂ ಯಾರನ್ನಾದರೂ ಪ್ರೀತಿಸಲು ಇಚ್ಛಿಸುವರು, ವ್ಯಕ್ತಿಯಲ್ಲದಿದ್ದರೆ, ಕೊನೆಯ ಪಕ್ಷ ಒಂದು ಹಾಡುವ ಹಕ್ಕಿ ಅಥವಾ ನಾಯಿ; ಪ್ರೀತಿಸಲು ಏನಾದರೊಂದು ವಸ್ತು. ಮತ್ತೊಂದರೊಂದಿಗೆ ತಾದಾತ್ಮ್ಯ, ತನ್ನನ್ನು ಹೊರತುಪಡಿಸಿ ವಿಶ್ವದ ಇತರರೊಂದಿಗೆ ತಾದಾತ್ಮ್ಯ ಹೊಂದುವುದರ ಸಂಕೇತ. ಇದೇ ಉತ್ತರ: ಪ್ರೀತಿಯ ಸಾರ್ಥಕತೆ ಪ್ರೀತಿ. ಅದೇ ಅದರ ಗುರಿ.

ನೀವು ತಾತ್ತ್ವಿಕ ದೃಷ್ಟಿಯಿಂದ ನೋಡಬೇಕಿದ್ದರೆ, ಪ್ರೀತಿ ಎಂದರೆ ಸತ್ಯದ ಸಾಕ್ಷಾತ್ಕಾರವೂ ಹೌದೆಂದು ನಾನು ಹೇಳುತ್ತೇನೆ. ನಾನು ತಾತ್ತ್ವಿಕ, ತರ್ಕಬದ್ಧವಾದ ಭಾಷೆಯಲ್ಲಿ ಮಾತನಾಡಿದರೆ ನೀವು ಕೂಡಲೆ ಒಪ್ಪಿಕೊಳ್ಳುತ್ತೀರಿ. ನಮ್ಮ ನಿಜವಾದ ಸ್ವಭಾವ ನಿಜವಾಗಿಯೂ ಅನಂತ; ಪ್ರತಿಯೊಂದೂ ಅನಂತ. ಆದುದರಿಂದ ನಾವು ಪ್ರತಿಯೊಂದರೊಂದಿಗೂ ತಾದಾತ್ಮ್ಯವನ್ನು ಅನುಭವಿಸಬೇಕು ಎಂದು ನಾನು ಹೇಳಿದರೆ, 'ಹೌದು, ಅದು ಸರಿ, ಅದೇ ಸತ್ಯ' ಎಂಬುದಾಗಿ ನೀವು ಹೇಳುತ್ತೀರಿ. ಆದರೆ ನಾವು ಪ್ರೀತಿಯ ಭಾಷೆಯನ್ನೂ ಮಾತನಾಡಬಹುದು. ಅದ್ವೈತದ ಬಗ್ಗೆ ಪ್ರೀತಿಯ ಭಾಷೆ ಹಾಗೂ ತರ್ಕದ ಭಾಷೆ – ಈ ಎರಡು ರೀತಿಯಲ್ಲಿಯೂ ಮಾತನಾಡಬಹುದು ಎಂದು ನಾನು ಯಾವಾಗಲೂ ಯೋಚಿಸುತ್ತಿದ್ದೆ. ಸಾಮಾನ್ಯವಾಗಿ, ತಾರ್ಕಿಕ ಭಾಷೆ ಸತ್ಯವನ್ನು ವಿವರಿಸಲು ಬಳಸಲ್ಪಡುತ್ತದೆಯಾದರೂ, ಸತ್ಯವನ್ನರಸುವುದರ ಬಗ್ಗೆ ಇರುವ ತಪ್ಪುಕಲ್ಪನೆಯನ್ನು ತೊಡೆದುಹಾಕುವುದಕ್ಕಾಗಿ, ಅದೇ ಸತ್ಯವನ್ನು ವಿವರಿಸಲು ಹೃದಯದ ಭಾಷೆಯನ್ನು ಬಳಸಲು ಯತ್ನಿಸಬೇಕು. ಯಾವ ರೀತಿಯಿಂದ ವಿವರಿಸಿದರೂ ಅದು ಅದೇ ಅಲ್ಲವೆ? ಒಂದೇ ಮನಃಸ್ಥಿತಿ ಎರಡು ಮಾರ್ಗಗಳಿಗೂ ಅನ್ವಯಿಸುವುದು.

ಈಗ ಏನಾಗಿದೆ? ನಾನು ಆಗಲೇ ಸೂಚಿಸಿದಂತೆ, ಇಂದ್ರಿಯಾಭಿಲಾಷೆಗಳು ಭಗವಂತನ ಮೇಲಣ ನಿಜವಾದ ಬಯಕೆಯ ಸುಳ್ಳು ಪ್ರತಿನಿಧಿಗಳು. ಈ ವಾಸ್ತವಾಂಶವನ್ನು ನಾವು ತಿಳಿದಾಗ ನಮ್ಮ ಆಸೆಗಳೆಲ್ಲವೂ ಒಟ್ಟುಗೂಡುವುವು. ಮನಸ್ಸಿನ ಎಲ್ಲ ಭಾವನೆಗಳೂ, ಎಲ್ಲ ಶಕ್ತಿಗಳೂ ಮಿಳಿತವಾಗಿ, ಒಗ್ಗೂಡಿ ಭಗವಂತನಿಗಾಗಿ ವ್ಯಾಕುಲತೆಯಾಗುವುದು. ಈ ಅದ್ಭುತ ವ್ಯಾಕುಲತೆ, ಹಲವು ಇಂದ್ರಿಯಾಕಾಂಕ್ಷೆಗಳ ರೂಪದಲ್ಲಿ ಚದುರಿಹೋದಾಗ ನಮ್ಮ ಜೀವನ ವಿಷದ ಕೋಡಿಯಾಗಿತ್ತು; ಆದರೆ ನಾವು ಆ ಆಸೆಗಳಿಗೆ ಸರಿಯಾದ ದಿಕ್ಕನ್ನು ಕೊಟ್ಟಾಗ ಅವೆಲ್ಲವೂ ಒಟ್ಟಿಗೆ ಸೇರಿ ಒಂದು ಬಲವಾದ, ಶಕ್ತಿಯುತವಾದ, ಮಧುರ ಮತ್ತು ಸರ್ವಸಂಪನ್ನವಾದ ನದಿಯಾಗುವುದನ್ನು ನೋಡುತ್ತೇವೆ.

ಯಾರು ಭಗವದ್ವ್ಯಾಕುಲತೆಯ ಅವಸ್ಥೆಯನ್ನು ಮುಟ್ಟಿರುವರೊ ಅವರಿಗೆ ಆಗುವುದು ಹಾಗೆಯೇ: ಸೌಂದರ್ಯಕ್ಕಾಗಿ, ಮಾಧುರ್ಯಕ್ಕಾಗಿ, ಪ್ರೀತಿ ಮತ್ತು ವಿಶ್ವಾಸಕ್ಕಾಗಿ, ಅಧಿಕಾರ ಮತ್ತು ಭದ್ರತೆಗಾಗಿ, ಶಾಶ್ವತವಾಗಿ ಬದುಕುವುದಕ್ಕಾಗಿ, ಎಲ್ಲರೊಡನೆ ಹೊಂದಿಕೊಂಡು ಇರುವುದಕ್ಕಾಗಿ, ಎಲ್ಲವನ್ನೂ ಪಡೆಯುವುದಕ್ಕಾಗಿ, ಎಲ್ಲವನ್ನೂ ಒಟ್ಟುಗೂಡಿಸುವುದಕ್ಕಾಗಿ ಮಾಡುವ ಹುಡುಕಾಟ – ಈ ನಮ್ಮ ಬಯಕೆಗಳೆಲ್ಲವೂ ಸೇರಿ ಒಂದು ಮಹಾನ್ ವ್ಯಾಕುಲತೆಯಾಗುತ್ತದೆ. ಆ ವ್ಯಾಕುಲತೆ ಈಡೇರುವುದು, ನಾವು ಹುಡುಕುತ್ತಿರುವುದೆಲ್ಲದರ ಆಕರವಾದ ಭಗವಂತನಲ್ಲಿ ಎಂಬುದು ನಮಗೆ ತಿಳಿದಿದೆ. ಅನಂತ ಪ್ರೀತಿ, ಅನಂತ ಜೀವನ, ಅನಂತ ಶಕ್ತಿ, ಅನಂತ ಬುದ್ಧಿಶಕ್ತಿ, ಅನಂತ ಒಳ್ಳೆಯತನ, ಅನಂತ ಶಾಂತಿ, ಅನಂತ ಸಮನ್ವಯ ಎಲ್ಲದರ ಮೂಲ ಅವನೇ. ಹೌದು, ಅವನೇ ಸರ್ವಸ್ವ.

ಯಾವಾಗ ಒಬ್ಬ ಇಂತಹ ಹೃದಯದ ವ್ಯಾಕುಲತೆಯನ್ನು ಹೊಂದುವನೋ ಅವನು ಅಲ್ಲಿಗೆ ನಿಲ್ಲುವುದಿಲ್ಲ. ನಮ್ಮ ದೃಷ್ಟಿಯಿಂದ ಅದೊಂದು ಅದ್ಭುತ ಸಾಧನೆಯಂತೆ ಕಾಣಬಹುದು. ಆದರೆ ಇಂಥ ಅವಸ್ಥೆಯನ್ನು ಮುಟ್ಟಿದವನ ದೃಷ್ಟಿಯಿಂದ ಅದು ಮುಂದಿನ ಸಾಧನೆಯ ಪ್ರಾರಂಭವಷ್ಟೆ. ಆತನಾಗಲಿ ಆಕೆಯಾಗಲಿ ಎಲ್ಲಾ ಬಗೆಯ ಆಧ್ಯಾತ್ಮಿಕ ಸಾಧನೆಗಳನ್ನು ಕೈಗೊಳ್ಳಬಯಸುತ್ತಾರೆ. ನಿಮಗೆ ಆ ವ್ಯಾಕುಲತೆ ಇದ್ದರೆ, ನೀವು ಬೇಕಾದಷ್ಟು ಸಾಧನೆಯನ್ನು ಮಾಡಬಹುದು. ದೇಹ ಅದನ್ನು ಅಂಗೀಕರಿಸುತ್ತದೆ. ನೀವು ತಿನ್ನಿ, ಬಿಡಿ, ನಿದ್ರಿಸಿ ಇಲ್ಲವೆ ಬಿಡಿ, ನೀವು ಅದ್ಭುತ ಪ್ರಮಾಣದ ಸಾಧನೆ ಮಾಡಬಹುದು. ಅದಕ್ಕಿಂತ ಮೊದಲು ಪ್ರತಿಯೊಂದನ್ನೂ ರೂಢಿಸಬೇಕಾಗುತ್ತದೆ, ಪ್ರತಿಯೊಂದನ್ನೂ ಅದರ ಕ್ರಮದಂತೆಯೇ ಮಾಡ

ಬೇಕಾಗುತ್ತದೆ. ಆದರೆ ಆ ಸಮಯದಲ್ಲಿ ನೀವು ಹಿಂದೆ ಕಂಡು ಕೇಳರಿಯದ ಹೋರಾಟಗಳನ್ನು ಮಾಡಬೇಕಾಗುತ್ತದೆ. ಈ ಹೋರಾಟವೇಕೆ? ಏಕೆಂದರೆ, ಸ್ಥೂಲರೂಪದ ಬೇರ್ಪಡೆಯನ್ನು ಮನಸ್ಸಿನಲ್ಲಿ ಗೆದ್ದಿದ್ದರೂ ಅದು ಸೂಕ್ಷ್ಮರೂಪದಲ್ಲಿ ಇನ್ನೂ ಇರುತ್ತದೆ. ಅವನ್ನು ಇನ್ನೂ ಗೆದ್ದಿರುವುದಿಲ್ಲ, ಮತ್ತು ಎಚ್ಚರವಹಿಸದಿದ್ದರೆ, ಸೂಕ್ಷ್ಮರೂಪದ ಬೇರ್ಪಡೆ ಮತ್ತೆ ಎದುರಾಗುವ ಸಂಭವವಿರುವುದು. ಉತ್ತಮ ಆಧ್ಯಾತ್ಮಿಕ ವ್ಯಕ್ತಿ ಇದ್ದಕ್ಕಿದ್ದಂತೆ ಪ್ರಾಪಂಚಿಕನಾಗುವುದನ್ನು ನೀವು ನೋಡಿರಬಹುದು. ಇದು ಹೇಗಾಯಿತೆಂದು ನೀವು ಆಶ್ಚರ್ಯಪಡುವಿರಿ. ಬಹುಶಃ ಅಜಾಗರೂಕತೆ ಅವನನ್ನು ಕೆಳಮಟ್ಟಕ್ಕೆ ತಂದಿರಬೇಕು. ಈ ಸೂಕ್ಷ್ಮರೂಪದ ಆಸೆಗಳನ್ನೀಗ ನೀವು ಗೆಲ್ಲುತ್ತಿರುವಿರಿ; ಎಲ್ಲವನ್ನೂ ಬೇರುಸಹಿತ ಕಿತ್ತುಹಾಕಲು ಪ್ರಯತ್ನಿಸುತ್ತಿರುವಿರಿ. ನೀವು ಭೂಪ್ರದೇಶವನ್ನು ತೆರವುಗೊಳಿಸಬೇಕಾದರೆ ಮರಗಳನ್ನು ಕತ್ತರಿಸುವಿರಿ, ಮತ್ತು ಪ್ರಧಾನ ಬೇರುಗಳನ್ನು ತೆಗೆದುಹಾಕುವಿರಿ; ಆದರೂ ಬಹುಶಃ ಕೆಲವು ಸಣ್ಣ ಬೇರುಗಳು ಭೂಮಿಯ ಕೆಳಗೆ ಉಳಿದಿರುತ್ತವೆ. ಸ್ವಲ್ಪ ಕಾಲದ ನಂತರ ಅವುಗಳಿಂದ ಮೊಳಕೆಗಳು ಮೂಡುತ್ತವೆ. ನೀವೀಗ ಆ ಮೊಳಕೆಗಳನ್ನು ಬೇರುಸಹಿತ ಕಿತ್ತುಹಾಕುವ ಒಳ್ಳೆಯ ಕೆಲಸವನ್ನು ಮಾಡಬಯಸುವಿರಿ. ಈ ಸ್ಥಿತಿಯಲ್ಲಿರುವ ವ್ಯಕ್ತಿ ಸಾಧಾರಣ ಮನುಷ್ಯನಿಗೆ ಭಯಂಕರವಾಗಿ ಕಾಣುವನು. ನೀವು ಅವನ ಹತ್ತಿರ ಹೋದರೆ, ನಿಮಗೆ ಅಂತರ್ದೃಷ್ಟಿ ಇದ್ದರೆ, ಅವನ ಮನಸ್ಸಿನ ಆವೇಗದಿಂದ ನೀವು ಹೆದರುವಿರಿ. ನೀವು ಅವನನ್ನು ಅರ್ಥ ಮಾಡಿಕೊಳ್ಳಲೂ ಆರಿರಿ. ನಿಮ್ಮ ದೃಷ್ಟಿಯಲ್ಲಿ ಇನ್ನು ಅಂತಹವರು ಸಾಧಾರಣ ವ್ಯಕ್ತಿಗಳಂತೆ ಇರಲಾರರು.

ಅಂತಹ ಪ್ರಯತ್ನಗಳ ಫಲವಾಗಿ ಅವರಿಗೆ ಭಗವಂತನ ದೃಷ್ಟಿ ಉಂಟಾಗುವುದು. ಕೊನೆಯಲ್ಲುಳಿದ ಸಾಂತತೆಯ ಶೇಷ ಅವರ ಆತ್ಮದಿಂದ ಮಾಯವಾಗುವುದು. ಕೆಲವು ವೇಳೆ ಆ ಸ್ಥಿತಿಯನ್ನು ಭಕ್ತಿಯ ಉನ್ನತಾವಸ್ಥೆ, ಬುದ್ಧಿಯ ಅವಸಾನ ಎಂದು ಹೇಳಲಾಗಿದೆ. ಮನಸ್ಸು ಅಥವಾ ಬುದ್ಧಿ ಸಾಂತತೆಯ ಚಿಹ್ನೆ; ಆತ್ಮದ ಚಿಹ್ನೆಯಲ್ಲ. ಆತ್ಮನನ್ನು ತಿಳಿದುಕೊಳ್ಳುವುದು ಆತ್ಮ. ಆತ್ಮರೂಪಿಯಾದ ಮಾನವ ಆತ್ಮರೂಪಿಯಾದ ಭಗವಂತನನ್ನು ತಿಳಿದುಕೊಳ್ಳುತ್ತಾನೆ. ಆ ಸ್ಥಿತಿಯೇ ಸ್ವಾಮಿ ವಿವೇಕಾನಂದರು ಹೇಳಿದಂತೆ, ಆತ್ಮನಿಂದ ಆತ್ಮನ ಪೂಜೆ. ವಿವರಿಸಲು ಸಾಧ್ಯವಿಲ್ಲದ ಸ್ಥಿತಿ, ಅದು. ಸಹಜವಾಗಿ, ಒಂದು ತಲೆಮಾರಿನಲ್ಲಿ ಎಲ್ಲೋ ಕೆಲವರು ಆ ಸ್ಥಿತಿಯನ್ನು ಮುಟ್ಟುವರು. ಅಂತಹವರನ್ನು ನಾವು ನೋಡುವುದು ಅಪರೂಪ. ಯಾರಾದರೊಬ್ಬ ವ್ಯಕ್ತಿ ಮಹಾತ್ಮನಾದರೆ, ನಮಗೆ ಅದು ತಿಳಿಯುತ್ತದೆ ಎಂದು ನಿಮ್ಮಲ್ಲಿ ಕೆಲವರು ಯೋಚಿಸಬಹುದು. ಇಲ್ಲ, ನಮ್ಮ ಶಾಸ್ತ್ರಗಳಲ್ಲಿ ಹೇಳಿದೆ, ಕೆಲವು ವೇಳೆ ಅವರು ಮೂರ್ಖರಂತೆ ಅಥವಾ ಕೋಡಂಗಿಯಂತೆ ಕಾಣುತ್ತಾರೆ. ಅಂತಹ ಸ್ಥಿತಿಯನ್ನು ಯಾರು ಮುಟ್ಟಿದ್ದಾರೆಂದು ನಾವು ಹೇಗೆ ತಿಳಿದುಕೊಳ್ಳುವೆವು? ದೇವರನ್ನು ತಿಳಿದವರು ಮಾತ್ರ ಅಂತಹವರನ್ನು ಗುರುತಿಸಬಲ್ಲರು. ಕೆಲವರನ್ನು ನಾವು ತಿಳಿಯುವೆವು. ಏಕೆಂದರೆ, ನಾನು ಹಿಂದೆ ಹೇಳಿದಂತೆ, ಅವರು ಮಾನವರ ಮಧ್ಯೆ ಒಂದು ನಿರ್ದಿಷ್ಟ ಉದ್ದೇಶದಿಂದ ಇರುವವರು. ಹಾಗಲ್ಲದಿದ್ದರೆ, ನಾವು ಅವರನ್ನು ತಿಳಿಯಲಾರೆವು. ಅದೇನಾದರೂ ಇರಲಿ, ಅಂತಹ ಸ್ಥಿತಿ ಅಕಸ್ಮಾತ್ತಾಗಿ ದೊರೆತಿಲ್ಲ ಎಂಬುದನ್ನು ನೀವು ಯಾವಾಗಲೂ ನೆನಪಿನಲ್ಲಿಟ್ಟಿರಬೇಕು.

### ಭಾಗ ೨

### ನಾವು ಏನನ್ನು ಅಭ್ಯಸಿಸಬೇಕು?

ನಾವು ಅಭ್ಯಾಸ ಮಾಡಬೇಕಾದ ವಿಷಯಗಳು ಐದು ಎಂದು ಚೈತನ್ಯ ಹೇಳಿದ. ಕೆಲವು ವೇಳೆ ಅವನು ಮೂರು ವಿಷಯಗಳನ್ನು ಮಾತ್ರ ಹೇಳಿದ. ಬೋಧಿಸುವವರು, ಅದರಲ್ಲೂ ಜಗದ್ಗುರುಗಳು ವಿಷಯಗಳನ್ನು ಸರಳಗೊಳಿಸುವುದು ಅತ್ಯಂತ ಸ್ವಾಭಾವಿಕವಾಗಿರುತ್ತದೆ. ಅವರು ಮುಖ್ಯವಾದುದನ್ನೇ ಹೇಳುತ್ತಾರೆ ಮತ್ತು ಅವರು ಹೇಳುವುದು ಒಮ್ಮೆಲೆ ನಿಮಗೆ ಮನದಟ್ಟಾಗುತ್ತದೆ. ಆದ್ದರಿಂದ ಅವನ್ನು ಅಭ್ಯಾಸಮಾಡಲು ಸಾಧ್ಯವಾಗುತ್ತದೆ.

ಜೀವೇ ದಯಾ, ನಾಮೇ ರುಚಿ, ವೈಷ್ಣವ ಸೇವಾ – ಈ ಮೂರನ್ನು ಅಭ್ಯಾಸ ಮಾಡಿದರೆ ಕ್ರಮೇಣ ಉನ್ನತ ಮಟ್ಟದ ಭಕ್ತಿಯನ್ನು ಹೊಂದಬಹುದು ಮತ್ತು ಭಗವಂತನ ದರ್ಶನ ಪಡೆಯಬಹುದು ಎಂದು ಚೈತನ್ಯ ಹೇಳಿದ.

'ಜೀವೇ ದಯಾ' ಎಂದರೇನು? ಎಲ್ಲಾ ಜೀವಿಗಳಲ್ಲಿಯೂ ಅನುಕಂಪ. ಅನುಕಂಪವಿರಲಿ. ನಿಮ್ಮ ಹೃದಯವನ್ನು ಕಠಿಣಗೊಳಿಸಬೇಡಿ. ಒಬ್ಬ ವ್ಯಕ್ತಿ ಒಳ್ಳೆಯವನೊ ಕೆಟ್ಟವನೊ ಎಂಬುದರ ಬಗ್ಗೆ ಮನಸ್ಸು ಕೊಡಬೇಡಿ; ಅದು ನಿಮ್ಮ ಕೆಲಸವಲ್ಲ. ದಯೆ ಇರಲಿ. ಯೋಚಿಸಿ, ದಯೆ ಎಂಬುದು ಮೇಲುನೋಟಕ್ಕೆ ಕಾಣುವ ಪೊಳ್ಳು ಭಾವನೆಯಲ್ಲ. ದಯೆಯುಳ್ಳ ವೈದ್ಯನು ರೋಗಿ ಬಂದಾಗ, ತಕ್ಷಣ ಹತ್ತಿರವಿರುವ ಶೀಷೆಯಿಂದ ಔಷಧಿ ತೆಗೆದುಕೊಂಡು ಅವನ ಬಾಯಿಗೆ ಸುರಿಯುವುದಿಲ್ಲ. ಆತ ನಿಧಾನವಾಗಿ, ರೋಗಿಯ ತೊಂದರೆಯನ್ನು ವಿಶ್ಲೇಷಿಸಿ, ಸರಿಯಾದ ಔಷಧವನ್ನು ಆಲೋಚಿಸಿ, ಅದನ್ನು ಕೊಡುತ್ತಾನೆ. ಅದು ಅವನ ದಯೆಯ ಒಂದು ಭಾಗ. ಅವನ ಅನುಕಂಪ ನೈಜವಾದುದಾದರೆ, ಅದು ರೋಗಿಯ ಮನದಾಳಕ್ಕೆ ಹೋಗುವುದು.

ಎರಡನೆಯದು, 'ನಾಮೇ ರುಚಿ.' ದೇವರ ಹೆಸರನ್ನು ಬಾರಿ ಬಾರಿಗೂ ಜಪಿಸುವುದು ಮತ್ತು ಅವನ ನಾಮಗುಣ ಸಂಕೀರ್ತನೆಯನ್ನು ಮಾಡುವುದು. ಅದನ್ನು ಮಾಡುವುದಕ್ಕೆ ನಿಮಗೆ ಸಹಜವಾಗಿ ಬಯಕೆಯಾಗುವುದು. ಮೂರನೆಯ ಸಾಧನೆ – 'ವೈಷ್ಣವ ಸೇವಾ.' ಎಂದರೆ ಭಗವಂತನ ಭಕ್ತರ ಸೇವೆ. ಚೈತನ್ಯ ತಿಳಿಸಿದ: ಈ ಮೂರು ಅಭ್ಯಾಸಗಳನ್ನು ಯಾರು ಮಾಡುತ್ತಾರೋ ಅವರು ಕ್ರಮೇಣ ಪ್ರಾಪಂಚಿಕತೆಯಿಂದ ಪಾರಾಗುತ್ತಾರೆ, ಅವರ ಹೃದಯ ಶುದ್ಧವಾಗುವುದು, ಮನಸ್ಸು ಸ್ತಬ್ಧವಾಗುವುದು ಮತ್ತು ಅದ್ಭುತವಾದ ಆನಂದ ಕ್ರಮೇಣ ಒಳಗಡೆ ಮಡುಗಟ್ಟುವುದು. ಅನಂತರ ಅವರಿಗೆ ಭಗವಂತನ ಅನುಭವವಾಗುವುದು.

ಚೈತನ್ಯನು ಐದು ಸಾಧನೆಗಳ ಬಗ್ಗೆ ಮಾತನಾಡಿದಾಗ ಈ ಮೂರು ಸಾಧನೆಗಳನ್ನು ವಿಸ್ತರಿಸಿ, 'ಸತ್ಸಂಗ, ಕೃಷ್ಣಸೇವಾ, ಪ್ರತಿಮಾ, ಭಾಗವತಶ್ರವಣ, ವ್ರಜೇ ವಾಸ್ – ಪಂಚ ಸಾಧನಾ ಪ್ರಧಾನ್' ಎಂದು ಹೇಳಿದನು. ಇವೇ ಭಕ್ತಿಮಾರ್ಗದ ಐದು ಮುಖ್ಯ ಸಾಧನೆಗಳು.

ಅವು ಏನು? **ಸತ್ಸಂಗ:** ಸಜ್ಜನರ ಸಹವಾಸ. ಸಜ್ಜನರು ಯಾರು? ಯಾರು ಪ್ರಾಪಂಚಿಕರಲ್ಲವೋ ಅವರು. ಪ್ರಾಪಂಚಿಕ ರಲ್ಲಿಯೂ ಒಳ್ಳೆಯ ಜನರಿದ್ದಾರೆ, ಆದರೆ ಭಕ್ತಿಯನ್ನು ರೂಢಿಸು ವುದಕ್ಕೆ ಪ್ರಪಂಚಕ್ಕೆ ಬದ್ಧರಾಗಿರುವ ಒಳ್ಳೆಯ ಜನರಿಂದ ನಿಮಗೆ ಉಪಯೋಗವಾಗುವುದಿಲ್ಲ. ಅವರ ಒಳ್ಳೆಯತನವನ್ನು ನೀವು ದೂರದಿಂದ ಅಥವಾ ಸ್ವಲ್ಪ ಕಾಲ ಅವರೊಂದಿಗೆ ವ್ಯವಹರಿಸುವು ದರಿಂದ ಮೆಚ್ಚಬಹುದು. ಆದರೆ ನೀವು ಅವರ ಸಹವಾಸವನ್ನು ಮಾಡಿದರೆ, ನಿಮ್ಮ ಪ್ರಾಪಂಚಿಕತೆಯನ್ನು ಅವರ ಪ್ರಾಪಂಚಿಕತೆ ಬಲಗೊಳಿಸಬಹುದಾದ ಅಪಾಯವಿದೆ. ನೀವು ಅಜಾಗರೂಕ ರಾಗುವ ಅವಕಾಶವಿರುತ್ತದೆ.

'ಪ್ರಾಪಂಚಿಕರಲ್ಲದ ಒಳ್ಳೆಯ ವ್ಯಕ್ತಿಗಳು ಎಲ್ಲಿರುತ್ತಾರೆ?' ಎಂದು ನೀವು ಕೇಳಬಹುದು. ಅವರನ್ನು ಕಂಡುಹಿಡಿಯುವ ಒಂದು ಮಾರ್ಗವೆಂದರೆ, ಅವರು ಹೆಂಡತಿ ಮಕ್ಕಳು ಗಂಡ ಸಂಬಂಧಿಗಳು, ಸಂಸಾರದ ಕಷ್ಟಸುಖಗಳನ್ನು, ಪ್ರಪಂಚದ ವಿದ್ಯ ಮಾನಗಳನ್ನು ಕುರಿತು ಮಾತನಾಡಲು ಅವಕಾಶ ಕೊಡುವುದಿಲ್ಲ ಎಂಬ ಷರತ್ತಿನೊಂದಿಗೆ ನೀವು ಭಕ್ತರೊಡನೆ ಸೇರುವುದು. ಅವರು ಯಾವಾಗ ಅಂತಹ ವಿಷಯಗಳನ್ನು ಕುರಿತು ಮಾತನಾಡಲು ಪ್ರಾರಂಭಿಸುವರೋ ಆಗ ನೀವು ಅದನ್ನು ನಿರ್ಬಂಧಿಸಬೇಕು. ಅವರು ನಿಮಗಿಂತ ಉತ್ತಮರಾಗಿಲ್ಲದಿದ್ದರೂ ಆಗ ಅಂತಹವರ ಒಡನಾಟ ಉತ್ಸಾಹಕಾರಿಯಾಗಿರುವುದು. ಯಾರು ಆಧ್ಯಾತ್ಮಿಕ ಜೀವನವನ್ನು ನಡೆಸಲು ಯತ್ನಿಸುತ್ತಿರುವರೋ ಅವರು ಭಕ್ತಿ ಮಾರ್ಗದಲ್ಲಿ ಸ್ಫೂರ್ತಿದಾಯಕರಾಗಿರುವರು ಎಂದು ಹೇಳು ತ್ತಾರೆ. ಅದು ಎಲ್ಲ ಮಾರ್ಗಗಳ ಬಗೆಗೂ ನಿಜ. ಜ್ಞಾನಮಾರ್ಗದಲ್ಲಿ ಇದರಿಂದ ಅಷ್ಟು ಪ್ರಯೋಜನವಾಗುವುದಿಲ್ಲ, ಏಕೆಂದರೆ ಅದು ಮೌನದ ಮಾರ್ಗ. ನೀವು ಅಂತರ್ಮುಖಿಗಳಾಗಬೇಕು ಮತ್ತು ಅದರಲ್ಲಿ ನಡೆಯುವ ಆತ್ಮವಿಶ್ಲೇಷಣೆ ಎಷ್ಟು ಸೂಕ್ಷ್ಮವೆಂದರೆ ಅಲ್ಲಿ ನೀವು ಏಕಾಂಗಿಯಾಗಿರಬೇಕು.

ಆದರೆ ಭಕ್ತಿಮಾರ್ಗದಲ್ಲಿ ಈ ವೈಶಿಷ್ಟ್ಯತೆ ಇದೆ – ನೀವು ಭಕ್ತರ ಸಂಗದಲ್ಲಿದ್ದರೆ, ಅವರು ನಿಮ್ಮ ಮಟ್ಟದವರೇ ಆಗಿದ್ದರೂ, ಪ್ರಾಪಂಚಿಕ ವಿಷಯಗಳಲ್ಲಿ ಮುಳುಗಿಹೋಗದಿದ್ದರೆ ನಿಮಗೆ ಪ್ರಯೋಜನವಾಗುವುದು. ಭಕ್ತರು ಹೆಚ್ಚಾಗಿದ್ದಷ್ಟೂ ಹೆಚ್ಚು ಸಂತೋಷ. ನೀವು ಅವರೊಡನೆ ಬೆರೆಯಬಹುದು, ದೇವರ ಬಗ್ಗೆ ಮಾತನಾಡಬಹುದು, ಅವನ ಗುಣ ರೂಪ ವೈಭವಗಳನ್ನು ಕುರಿತು ಹಾಡುವುದು ಮುಂತಾದುವನ್ನು ಮಾಡಬಹುದು. ಇದು ಸ್ಫೂರ್ತಿ ದಾಯಕವಾಗಿರುತ್ತದೆ. ನೀವು ಮತ್ತೊಬ್ಬರ ಪ್ರೀತಿಗೆ ಒಳಗಾದರೆ, ನೀವು ಕೂಡಲೆ ನಿಮ್ಮ ಸ್ನೇಹಿತರನ್ನು ಸಂಪರ್ಕಿಸಿ ಅದರ ಬಗ್ಗೆ ಹರಟುವಿರಿ. ಅದು ಎಲ್ಲರೊಂದಿಗೂ ಅಲ್ಲ, ನಿಮಗೆ ನಿಕಟವಾದವ ರೊಡನೆ. ಅದರಿಂದ ನಿಮ್ಮ ಪ್ರೀತಿ ಹೆಚ್ಚು ಉತ್ಕಟವಾಗುವುದು ನಿಮಗೆ ತಿಳಿಯುವುದು. ಇದು ಆಧ್ಯಾತ್ಮಿಕ ಪ್ರೀತಿಯ ವಿಷಯ ವಾಗಿಯೂ ನಿಜ. ಅದನ್ನು ಸತ್ಸಂಗ, ಒಳ್ಳೆಯವರ ಒಡನಾಟ ಎಂದು ಕರೆಯುತ್ತಾರೆ.

ಈ ಪ್ರವಚನದ ದೃಷ್ಟಿಯಿಂದ, ಒಳ್ಳೆಯವರು ಎಂದರೆ ನಿಜ ವಾಗಿಯೂ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದವರು ಮತ್ತು ಯಾರ ಒಡನಾಟದಿಂದ ನಮಗೆ ಉತ್ತಮ ಭಕ್ತಿ ಭಾವನೆ ಉಂಟಾ ಗುತ್ತದೆಯೋ ಅವರು. ನಮಗೆ ಬಹು ಮುಖ್ಯವಾದ ವಿಷಯ ವೆಂದರೆ ಭಗವಂತನ ಆನಂದದ ಸವಿಯನ್ನು ಪಡೆಯುವುದು. ಏಕೆಂದರೆ, ಒಮ್ಮೆ ಆ ಆನಂದದ ಸವಿ ನಮಗೆ ಸಿಕ್ಕರೆ, ಉಳಿದೆಲ್ಲ ಸಂತೋಷಗಳೂ ಸಪ್ಪೆಯಾಗುತ್ತವೆ; ಅವು ನಮಗೆ ಬೇಕಾದುದಕ್ಕಿಂತ ಕೆಳಮಟ್ಟದಲ್ಲಿ ಇದ್ದು, ನಿಸ್ಸಾರವಾಗಿ ತೋರುತ್ತವೆ. ಇನ್ನು ನಾವು ಅವುಗಳ ಹಿಂದೆ ಹೋಗುವುದಿಲ್ಲ. ಆದರೆ ಮೊದಲು ನಾವು ಆಧ್ಯಾತ್ಮಿಕ ಆನಂದದ ಸವಿಯನ್ನು ಪಡೆಯಬೇಕಾಗಿದೆ. ಅದನ್ನು ಪಡೆಯುವ ಒಂದು ಮಾರ್ಗವೆಂದರೆ, ಮತ್ತೊಬ್ಬ ಭಕ್ತನ ಮೂಲಕ. ನಿಮಗೆ ಅದು ದೊರೆತಿಲ್ಲದೆ ಇರಬಹುದು, ಆದರೆ ನೀವು ಇನ್ನೊಬ್ಬ ವ್ಯಕ್ತಿಯಲ್ಲಿ ಅದನ್ನು ಕಾಣುತ್ತೀರಿ. ಕ್ರಮೇಣ ಅದನ್ನು ನಿಮ್ಮಲ್ಲಿ ಕಾಣುವಿರಿ. ಒಮ್ಮೆ ಅದು ಉಂಟಾಯಿತೆಂದರೆ, ಅದನ್ನು ಪಡೆದುಕೊಳ್ಳಲು ನೀವು ಸತತ ಪ್ರಯತ್ನ ಮಾಡಲು ಪ್ರಾರಂಭಿಸುತ್ತೀರಿ. ಸತ್ಸಂಗದ ಇನ್ನೊಂದು ಪರಿಣಾಮವೆಂದರೆ, ನಮ್ಮಲ್ಲಿರುವ ಅದಕ್ಕೆ ವಿರುದ್ಧವಾದ ವಿಷಯಗಳು, ಕೆಟ್ಟ ಸಂಸ್ಕಾರ ಗಳು, ಆಧ್ಯಾತ್ಮಿಕವಲ್ಲದ ಸಂಸ್ಕಾರಗಳು ಇವೆಲ್ಲವೂ ನಾಶವಾಗು ತ್ತವೆ.

ನಂತರ ಬರುವುದೇ 'ಕೃಷ್ಣ ಸೇವಾ.' ಎಂದರೆ, ದೇವರ ಪೂಜೆ. ಹೆಚ್ಚುಕಡಿಮೆ ಎಲ್ಲ ಧರ್ಮಗಳೂ ಪೂಜಾಯೋಗ್ಯವಾದ ಚಿಹ್ನೆಗಳು ಮತ್ತು ಪ್ರತಿಮೆಗಳು ಇವೆಯೆಂದು ನಂಬುತ್ತವೆ. ಭಾರತದಲ್ಲಿ ಅವಕ್ಕೆ ಎರಡು ಹೆಸರುಗಳಿವೆ: ಒಂದನೆಯದು ಪ್ರತೀಕ; ಇನ್ನೊಂದು ಪ್ರತಿಮೆ. ಪ್ರತೀಕ ಎಂದರೆ ದೇವರ ಚಿಹ್ನೆಯ ಮೇಲೆ ಧ್ಯಾನಿಸುವುದು. ಉದಾಹರಣೆಗೆ ಸೂರ್ಯ ಒಂದು ಚಿಹ್ನೆ. ಸೂರ್ಯ ಪ್ರಕಾಶಮಾನ, ಜೀವದಾತ ಮುಂತಾಗಿ. ಸೂರ್ಯನನ್ನು ದೇವರೆಂದೇ ಧ್ಯಾನಿಸಬಹುದು – ಸೂರ್ಯ ನೆಂದಲ್ಲ. ನೀವು ಒಂದು ವಸ್ತುವಿನ ಮೇಲೆ ಧ್ಯಾನಿಸುವಾಗ ಅದನ್ನು ಸಾಮಾನ್ಯವಾಗಿ ಹೇಗೆ ತಿಳಿದುಕೊಂಡಿರುವಿರೋ ಹಾಗೆ ಧ್ಯಾನಿಸಿದರೆ ಅದರಿಂದ ನಿಮಗೆ ಪ್ರಯೋಜನವಾಗುವುದಿಲ್ಲ. ಅದು ಒಂದರ ಚಿಹ್ನೆ ಎಂದು ಭಾವಿಸಿ, ನಂತರ ಅದರ ಮೇಲೆ ಧ್ಯಾನಿಸಿದರೆ, ಅದು ದೇವರ ಮೇಲೆ ಧ್ಯಾನಿಸುವುದಕ್ಕೆ ಸಮ ನಾಗುತ್ತದೆ.

*(ಮುಂದಿನ ಸಂಚಿಕೆಗೆ)*

# ಜಲಾಲುದ್ದೀನ್ ರೂಮಿ – ಸೂಫಿ ಕವಿ

ಸ್ವಾಮಿ ವೀರೇಶಾನಂದ



ಜಲಾಲುದ್ದೀನ್ ರೂಮಿ ಸೂಫೀ ಸಂತರ ಮಧ್ಯೆ ಸೂರ್ಯನಂತೆ ಇದ್ದಾನೆ. ಅವನಲ್ಲಿ ಒಬ್ಬ ಋಷಿಯ ಜ್ಞಾನ, ಸಾಕ್ಷಾತ್ಕಾರ ಮತ್ತು ಒಬ್ಬ ಪ್ರತಿಭಾನ್ವಿತ ಕವಿಯ ಸೃಜನಾತ್ಮಕ ಶಕ್ತಿ – ಇವೆಲ್ಲವೂ ಮಿಳಿತವಾಗಿದ್ದವು. ಅವನೊಬ್ಬ ಸುಮಧುರ ಗಾಯಕನಾಗಿದ್ದನು ಮತ್ತು ಉತ್ಕಟ ಭಗವತ್ಪ್ರೇಮಿಯಾಗಿದ್ದನು. ತಾನು ನೆಲೆಸಿದ್ದ ಇಡೀ ದೇಶವನ್ನು ಅವನು ತನ್ನ ದಿವ್ಯಕಾವ್ಯದ ಮಾಧುರ್ಯತೆಯಿಂದ ತುಂಬಿಬಿಟ್ಟನು. ಸಾಧಾರಣ ಜನರಿಗೆ ಕೂಡ ಆಧ್ಯಾತ್ಮಿಕತೆಯ ಪರಮ ಅದ್ಭುತಗಳನ್ನು ಅವನು ಪರಿಚಯಿಸಿದನು.

ರೂಮಿ ಹುಟ್ಟಿದ್ದು ೧೨೦೭ರ ಸೆಪ್ಟೆಂಬರ್ ೩೦ರಂದು. ಅವನು ಹುಟ್ಟಿದ್ದು ವಾಕ್ಶ್ ಎಂಬ ಹಳ್ಳಿಯಲ್ಲಿ. ಅದು ಇಂದಿನ ತಜಕಿಸ್ತಾನ ದೇಶದ ಬಾಲ್ಕ್ ರಾಜ್ಯದಲ್ಲಿದೆ. ಅಂದಿನ ದಿನಗಳಲ್ಲಿ ಬಾಲ್ಕ್ ಪ್ರದೇಶವು ಪರ್ಷಿಯಾ ಸಂಸ್ಕೃತಿಯ ಬಹು ದೊಡ್ಡ ಕೇಂದ್ರವಾಗಿತ್ತು. ಅಲ್ಲಿ ಹಲವಾರು ಶತಮಾನಗಳಿಂದ ಸೂಫೀ ಧರ್ಮವು ಬೆಳೆದು ಬಂದಿತ್ತು. ಬಾಲಕ ರೂಮಿಯ ಮೇಲೆ ಇದು ಗಾಢವಾದ ಪ್ರಭಾವ ಬೀರಿತ್ತು. ಅವನ ತಂದೆ ಬಹಾ-ಉದ್-ದಿನ್ ವಲಾಡ್ ಹಾಗೂ ಪರ್ಷಿಯನ್ ಕವಿಗಳಾದ ಅತ್ತರ್ ಮತ್ತು ಸನಯ್ – ಈ ಮೂವರೂ ರೂಮಿಯ ಮೇಲೆ ಅಳಿಸಲಾಗದ ಪ್ರಭಾವವನ್ನು ಬೀರಿದರು. ರೂಮಿಯ ತಂದೆ ಒಬ್ಬ ದೊಡ್ಡ ದೇವತಾಶಾಸ್ತ್ರಜ್ಞ, ನ್ಯಾಯಾಧೀಶ ಮತ್ತು ಅನುಭಾವ ಜೀವಿ. ಅವನನ್ನು 'ವಿದ್ವಾಂಸರ ಸುಲ್ತಾನ್' ಎಂದು ಸಾಮಾನ್ಯ ಜನರು ಕರೆಯುತ್ತಿದ್ದರು. ರೂಮಿಯ ತಾಯಿಯ ಹೆಸರು ಮುಮಿನಾ ಖಾಟೂನ್. ಅವಳು ಬಹಳ ಸರಳ ಮಹಿಳೆ.

ಮಂಗೋಲರು ಮಧ್ಯ ಏಷಿಯಾದ ಮೇಲೆ ೧೨೧೫ರಿಂದ ೧೨೨೦ರವರೆಗೆ ದಾಳಿ ಮಾಡಿದರು. ರೂಮಿಯ ತಂದೆ ತನ್ನ ಇಡೀ ಕುಟುಂಬದೊಂದಿಗೆ ಮತ್ತು ಕೆಲವರು ಶಿಷ್ಯರೊಂದಿಗೆ ಪಶ್ಚಿಮ ದಿಕ್ಕಿನೆಡೆಗೆ ಪ್ರಯಾಣ ಮಾಡಿದನು. ಇದೇ ಸಮಯದಲ್ಲಿ ರೂಮಿ ನಿಷಾಪುರ್ ಎಂಬ ಇರಾನಿನ ನಗರದಲ್ಲಿ ಪ್ರಸಿದ್ಧ ಕವಿಯಾದ ಅತ್ತರ್‌ನನ್ನು ಭೇಟಿಮಾಡಿದನು ಎಂದು ಹೇಳಲಾಗುತ್ತದೆ. ರೂಮಿಯ ಆಧ್ಯಾತ್ಮಿಕ ಶ್ರೇಷ್ಠತೆಯನ್ನು ಅತ್ತರ್ ಒಡನೆಯೇ ಗುರುತಿಸಿದನು. ರೂಮಿ ತನ್ನ ತಂದೆಯನ್ನು ಹಿಂಬಾಲಿಸುತ್ತ ನಡೆಯುತ್ತಿದ್ದನು. ಇದನ್ನು ನೋಡಿದ ಅತ್ತರ್ ಹೀಗೆ ನುಡಿದನಂತೆ: ''ಅದೋ ನೋಡು, ಅಲೆಗಳ ಹಿಂದೆ ಬರುತ್ತಿರುವ ಸಾಗರವನ್ನು'' ಎಂದು. ಅತ್ತರ್ ತನ್ನ ಒಂದು ಪುಸ್ತಕ 'ಅಸ್ರಾರ್‌ನಾಮಾ' ವನ್ನು ಅವನಿಗೆ ಕೊಡುಗೆಯಾಗಿ ನೀಡಿದನು. ಭೌತಿಕ ಜಗತ್ತಿಗೆ ಜೀವಿಯು ಬಂಧಿತನಾಗಿರುವುದನ್ನು ಈ ಪುಸ್ತಕ ವಿವರಿಸುತ್ತದೆ. ರೂಮಿಗೆ ಆಗ ಕೇವಲ ೧೮ ವರ್ಷ. ಹದಿಹರೆಯದ ಈ ಯುವಕನ ಮನಸ್ಸಿನ ಮೇಲೆ ಈ ಭೇಟಿ ಗಾಢವಾದ ಪ್ರಭಾವವನ್ನು ಉಂಟುಮಾಡಿತು. ರೂಮಿಯು ಭವಿಷ್ಯದಲ್ಲಿ ರಚಿಸಿದ ಎಲ್ಲ ಕವಿತಾ ಗ್ರಂಥಗಳಿಗೆ ಅದು ಬಹು ದೊಡ್ಡಮಟ್ಟದಲ್ಲಿ ಸ್ಫೂರ್ತಿಯ ಸ್ರೋತವಾಗಿ ಪರಿಣಮಿಸಿತು.

ನಿಷಾಪುರದಿಂದ ರೂಮಿಯ ಕುಟುಂಬದವರು ಬಾಗ್ದಾದಿಗೆ ಹೊರಟರು. ಅಲ್ಲಿ ಅನೇಕ ವಿದ್ವಾಂಸರು ಮತ್ತು ಸೂಫೀ ಸಂತರನ್ನು ಭೇಟಿಯಾದರು. ಬಾಗ್ದಾದಿನಿಂದ ಅವರು ಹೇಜಾಜ್ ಎಂಬ ಊರಿಗೆ ಹೋದರು. ತದನಂತರ ಪವಿತ್ರ ಮೆಕ್ಕಾ ಯಾತ್ರೆಯನ್ನು ಮಾಡಿದರು. ನಂತರ ಹಲವಾರು ಪಟ್ಟಣಗಳನ್ನು ದಾಟುತ್ತ, ಕಡೆಗೆ ಕರಮಾನ್ ಎಂಬ ಊರಿನಲ್ಲಿ ಏಳು ವರ್ಷಗಳ ಕಾಲ ನೆಲೆಸಿದರು. ಅಲ್ಲಿಯೇ ರೂಮಿಯ ತಾಯಿ ಹಾಗೂ ಸಹೋದರ ಮರಣ ಹೊಂದಿದರು. ೧೨೨೫ರಲ್ಲಿ ರೂಮಿ ಗೌಹರ್ ಖಾಟುನ್ ಎಂಬವಳನ್ನು ರೂಮಿ ಮದುವೆಯಾದನು. ಈ ದಂಪತಿಗಳಿಗೆ

ಇಬ್ಬರು ಮಕ್ಕಳಾದರು: ಸುಲ್ತಾನ್ ವಹಾದ್ ಮತ್ತು ಅಲಾ-ಎದ್ದೀನ್ ಚಲಾಬಿ. ತನ್ನ ಹೆಂಡತಿಯು ಮರಣಹೊಂದಿದಾಗ, ಅವನು ಇನ್ನೊಂದು ಮದುವೆಯಾದನು. ಇನ್ನಿಬ್ಬರು ಮಕ್ಕಳನ್ನು ಪಡೆದನು: ಅಮಿರ್ ಅಲಿಮ್ ಚಲಾಬಿ ಎಂಬ ಮಗ ಮತ್ತು ಮಲಕೇಹ್ ಖಾಟುಮ್ ಎಂಬ ಮಗಳು.

ಮೇ ೧, ೧೨೨೮ರಂದು ಅನಾತೋಲಿಯಾ ರಾಜ್ಯದ ದೊರೆಯ ಆಹ್ವಾನದ ಮೇರೆಗೆ ರೂಮಿಯ ಕುಟುಂಬದವರು ಕಡೆಗೂ ಆ ರಾಜ್ಯದ ಕೊನ್ಯಾ ಎಂಬಲ್ಲಿ ನೆಲೆಸಿದರು. ರೂಮಿಯ ತಂದೆಯು ಅಲ್ಲಿನ ಮದ್ರಸಾದ (ಧಾರ್ಮಿಕ ಶಾಲೆ) ಮುಖ್ಯಸ್ಥನಾದನು. ಅವನ ಮರಣಾನಂತರ, ೨೫ ವರ್ಷದ ರೂಮಿ ಅವನ ಪದವಿಯನ್ನು ಅಲಂಕರಿಸಿ, ಮೌಲ್ವಿಯಾದನು. ಇಷ್ಟಾದರೂ ಸಯ್ಯದ್ ಬರ್ಹಾನ್ ಎನ್ನುವ ಹಿರಿಯ ವ್ಯಕ್ತಿಯಿಂದ ರೂಮಿಯು ಶರಿಯಾ (ಇಸ್ಲಾಂ ಧರ್ಮದ ಕಾನೂನು) ಮತ್ತು ರೂಮಿಯ ತಂದೆ ರಚಿಸಿದ ತರಿಖಾ ಎಂಬ ಗ್ರಂಥದ ಅಧ್ಯಯನವನ್ನು ಮುಂದುವರೆಸಿದನು. ಸುಮಾರು ಒಂಬತ್ತು ವರ್ಷಗಳ ಕಾಲ ಹೀಗೆ ರೂಮಿಯು ಸೂಫೀ ಧರ್ಮದ ಅಭ್ಯಾಸವನ್ನು ಮಾಡಿದನು.

೧೨೪೦ರಲ್ಲಿ ಅವನ ಗುರು ಮರಣಹೊಂದಿದನು. ಅಂದಿನಿಂದ ರೂಮಿಯ ಸಾರ್ವಜನಿಕ ಜೀವನವು ಆರಂಭವಾಯಿತು. ಅವನು ಇಸ್ಲಾಂ ಧರ್ಮದ ಕಾನೂನನ್ನು ಜಾರಿಗೊಳಿಸುವ ನ್ಯಾಯಾಧೀಶನಾದನು. ಕೊನ್ಯಾ ನಗರದ ಮಸೀದಿಗಳಲ್ಲಿ ಹಲವಾರು ಪ್ರವಚನಗಳನ್ನು ಮಾಡಿದನು. ಅಲ್ಲದೆ ಅವನು ತನ್ನ ಅನುಯಾಯಿಗಳಿಗೆ ಮದ್ರಸಾಗಳಲ್ಲಿ ಬೋಧನೆ ಮಾಡುವ ಮೌಲ್ವಿಯಾಗಿಯೂ (ಇಸ್ಲಾಂ ಧಾರ್ಮಿಕ ಶಿಕ್ಷಕ) ಸೇವೆ ಸಲ್ಲಿಸಿದನು.

ಈ ಅವಧಿಯಲ್ಲಿಯೇ ರೂಮಿ ಅಂದಿನ ಕಾಲದ ಪ್ರಮುಖ ನಗರವಾದ ಡೆಮಾಸ್ಕಸ್‌ಗೆ ಹೋಗಿ, ನಾಲ್ಕು ವರ್ಷಗಳ ಕಾಲ ಅಲ್ಲಿ ನೆಲೆಸಿದ್ದನು. ಅಲ್ಲಿ ಸೂಫೀ ಸಂತನಾದ ದರ್ವೇಷ್ ಪಂಗಡಕ್ಕೆ ಸೇರಿದ ಶಾಮ್ಸ್-ಇ-ತಬ್ರಿಜಿ ಅನ್ನು ೧೨೪೪ರ ನವೆಂಬರ್ ೧೫ ರಂದು ಭೇಟಿಮಾಡಿದನು. ಇದು ಅವನ ಜೀವನದಲ್ಲಿ ಮಹತ್ತರವಾದ ಆಧ್ಯಾತ್ಮಿಕ ಪರಿವರ್ತನೆಯನ್ನು ಉಂಟುಮಾಡಿತು. ಯಶಸ್ವೀ ಬೋಧಕ ಮತ್ತು ನ್ಯಾಯಾಧೀಶನಾಗಿದ್ದ ರೂಮಿ ಒಬ್ಬ ಮಹಾನ್ ತಪಸ್ವಿಯಾಗಿ, ದೈವಭಕ್ತನಾಗಿ ಮಾರ್ಪಟ್ಟನು.

ಈ ಸಂದರ್ಭದಲ್ಲಿ ಒಂದು ಅದ್ಭುತ ಪ್ರಸಂಗವನ್ನು ಅಂದಿನ ಕಾಲದ ಕಥಾನಕಗಳು ದಾಖಲಿಸುತ್ತವೆ: ಶಾಮ್ಸ್ ಮಧ್ಯ ಏಷ್ಯಾದ ಹಲವಾರು ಕಡೆಗಳಿಗೆ ಪ್ರಯಾಣ ಮಾಡುತ್ತಿದ್ದನು. ಈ ಯಾತ್ರೆಯನ್ನು ಮಾಡುವಾಗ ಅವನು ಒಂದು ಇಚ್ಛೆಯನ್ನು ತನ್ನ ಮನಸ್ಸಿನಲ್ಲಿ ಇಟ್ಟುಕೊಂಡಿದ್ದನು. ಅವನು ತನ್ನ ಆಧ್ಯಾತ್ಮಿಕ ಸಂಗಾತಿಯನ್ನು ಅರಸುತ್ತಿದ್ದನು. ಅದಕ್ಕಾಗಿ ಭಗವಂತನಲ್ಲಿ ಅನವರತವಾಗಿ ಪ್ರಾರ್ಥನೆಯನ್ನು ಮಾಡುತ್ತಿದ್ದನು. ಆಗ ಒಂದು ವಾಣಿಯು ಅವನಿಗೆ ಕೇಳಿಸಿತು: ''ಇದಕ್ಕೆ ಬದಲಾಗಿ ನೀನು ಯಾವ ತಲೆದಂಡವನ್ನು ಕೊಡುತ್ತೀಯೆ?'' ಅದಕ್ಕೆ ಶಾಮ್ಸ್, ''ನನ್ನ ತಲೆಯನ್ನೇ ತಲೆದಂಡವಾಗಿ ನೀಡುತ್ತೇನೆ'' ಎಂದನು. ಆಗ ಆ ದಿವ್ಯವಾಣಿಯು ಹೀಗೆ ಹೇಳಿತು, ''ಹಾಗಾದರೆ ನೀನು ಕೊನ್ಯಾದ ಜಲಾಲ್-ಉದ್-ದಿನ್ ರೂಮಿಯನ್ನೇ ಹುಡುಕುತ್ತಿದ್ದೀಯೆ. ಅವನೇ ನಿನ್ನ ಆಧ್ಯಾತ್ಮಿಕ ಸಂಗಾತಿಯಾಗಲು ತಕ್ಕವನು.'' ಇದಾದ ಕೆಲವು ದಿನಗಳಾದ ಮೇಲೆ ಶಾಮ್ಸ್ ರೂಮಿಯನ್ನು ಭೇಟಿಯಾದನು. ೧೨೪೮ರ ಡಿಸೆಂಬರ್ ೫ ನೇ ತಾರೀಖಿನ ರಾತ್ರಿ. ರೂಮಿ ಮತ್ತು ಶಾಮ್ಸ್ ಮಾತನಾಡುತ್ತ ಕುಳಿತಿದ್ದರು. ಹಿಂದಿನ ಬಾಗಿಲಿನಿಂದ ಯಾರೋ ಶಾಮ್ಸ್‌ನನ್ನು ಕರೆದರು. ಅವನು ಅದು ಯಾರು ಎಂದು ನೋಡುವುದಕ್ಕೆ ಹೋದನು. ಅವನು ವಾಪಸ್ಸು ಬರಲೇ ಇಲ್ಲ; ಅವನ ಕೊಲೆಯಾಗಿತ್ತು. ಹೀಗೆ ಅವನು ದಿವ್ಯಸ್ನೇಹದ ಸಲುವಾಗಿ ತನ್ನ ಶಿರವನ್ನೇ ಆಹುತಿ ನೀಡಿಬಿಟ್ಟನು.

ರೂಮಿಯ ಸಂತಪ್ತ ಹೃದಯದ ಭಾವನೆ ಅವನ ಪದ್ಯಗಳಲ್ಲಿ ಧಾರೆಯಾಗಿ ಹರಿದಿದೆ. ಹಠಾತ್ತನೆ ಕಣ್ಮರೆಯಾದ ತನ್ನ ಗುರುವನ್ನು ಅರಸುತ್ತ ಅವನು ಪ್ರಯಾಣ ಮಾಡಿದನು. ಅನಂತರ ಅವನಿಗೆ ಈ ಸಾಕ್ಷಾತ್ಕಾರವಾಯಿತು:

**ನಾನೇಕೆ ಅರಸಲಿ? ಅವನೇ ನಾನಾಗಿರುವೆ.**
**ಅವನ ಸತ್ತ್ವವೆ ನನ್ನ ನುಡಿಯಾಗಿ ಉಲಿಯುತಿದೆ**
**ನನ್ನನೇ ನಾನು ಅರಸುತಿರುವೆ!**

ತನ್ನ ಗುರುವಿನ ಮರಣಾನಂತರ ರೂಮಿಯ ಕವನಗಳ ಲಿಪಿಕಾರ ಮತ್ತು ಅವನ ಪ್ರಿಯ ವಿದ್ಯಾರ್ಥಿ ಹುಸ್ಸಮ್ -ಇ - ಚಲಾಬಿ ರೂಮಿಯ ಆಧ್ಯಾತ್ಮಿಕ ಆಪ್ತಸಂಗಾತಿಯಾಗುತ್ತಾನೆ. ಒಮ್ಮೆ ಇಬ್ಬರೂ ಕೊನ್ಯಾ ನಗರದ ತೋಟದಲ್ಲಿ ಅಡ್ಡಾಡುತ್ತಿದ್ದರು. ಆಗ ಹುಸ್ಸಮ್ ತನ್ನ ಗುರುವಿಗೆ ಒಂದು ಹೊಸ ಪುಸ್ತಕದ ಕಲ್ಪನೆಯನ್ನು ನೀಡುತ್ತಾನೆ: ''ಸನಾಯ್ ಬರೆದ 'ಇಲ್ಲಾಹಿ ನಾಮ' ಅಥವಾ ಅತ್ತರನ 'ಮಾನ್‌ಟಿಕ್-ಉಟ್-ತಯರ್' ನಂಥ ಮಹಾನ್ ಗ್ರಂಥಗಳ ಹಾಗೆ (ಅವೆಲ್ಲವೂ ಅಂದಿನ ಕಾಲದ ಬಹು ಮಾನ್ಯತೆ ಪಡೆದ ಸೂಫೀ ಗ್ರಂಥಗಳು) ನೀನೊಂದು ಉದ್ದಾಮ ಗ್ರಂಥವನ್ನು ರಚಿಸುವುದಾದರೆ, ಅದು ನೂರಾರು ಮಂದಿ ಸಂಗೀತಗಾರರ ನಿತ್ಯ ಸಂಗಾತಿಯಾಗಬಲ್ಲುದು. ಅವರೆಲ್ಲರೂ ಈ ದಿವ್ಯ ಕವನದಿಂದ ತಮ್ಮ ಹೃದಯಗಳನ್ನು ಪುನೀತಗೊಳಿಸಿಕೊಳ್ಳುತ್ತಾರೆ ಮತ್ತು ಅದಕ್ಕೆ ಸಮಂಜಸವಾದ ಸಂಗೀತವನ್ನು ರಚಿಸುತ್ತಾರೆ.'' ಇದಕ್ಕೆ ಉತ್ತರವಾಗಿ ರೂಮಿ ಮುಗುಳ್ನಗೆಯನ್ನು ಸೂಸುತ್ತಾನೆ. ಒಂದು ಕಾಗದವನ್ನು ತೆಗೆದುಕೊಂಡು, ತನ್ನ ಉದ್ಗ್ರಂಥವಾದ 'ಮಸ್ನವಿ'ಯ ಮೊದಲ ೧೮ ಸಾಲುಗಳನ್ನು ರಚಿಸುತ್ತಾನೆ. ಅವು ಆರಂಭವಾಗುವುದು ಹೀಗೆ:

**ನಾದವಾದ್ಯವು ಉಲಿವ ಕಥೆಯನಿದೊ ಕೇಳು**
**ಅಗಲಿಕೆಯ ಭಾವಗಳನೆಂತು ಹಾಡುವುದು...**

ಹುಸ್ಸಮ್ ರೂಮಿಯನ್ನು ಇನ್ನೂ ಬರೆಯೆಂದು ಒತ್ತಾಯಿಸುತ್ತಾನೆ. ಇದರ ಫಲವಾಗಿ, ರೂಮಿ ತನ್ನ ಜೀವನದ ಮುಂದಿನ ೧೨ ವರ್ಷಗಳಷ್ಟು ಕಾಲವನ್ನು ಅನಾತೊಲಿಯಾ ರಾಜ್ಯದಲ್ಲಿ ಕಳೆದು, ತನ್ನ ಮಹಾನ್ ಕೃತಿಯಾದ **ಮಸ್ನವಿ** ಗ್ರಂಥದ ಆರು ಸಂಪುಟಗಳಷ್ಟು ಕಾವ್ಯಧಾರೆಯನ್ನು ತನ್ನ ಶಿಷ್ಯ ಹುಸ್ಸಮ್‌ನ ಕೈಯಲ್ಲಿ ಹೇಳಿ ಬರೆಸುತ್ತಾನೆ. ಇದು ಅವನ ಜೀವಮಾನದ ಅತ್ಯಂತ ಬೃಹತ್ತಾದ ಮತ್ತು ಅರ್ಥಪೂರ್ಣವಾದ ಉದ್ಗ್ರಂಥ ವಾಗಿದೆ.

೧೨೭೩ ರ ಡಿಸೆಂಬರ್ ತಿಂಗಳಿನಲ್ಲಿ ರೂಮಿ ವ್ಯಾಧಿಗ್ರಸ್ತನಾದನು. ಅವನು ತನ್ನ ಸಾವಿನ ಬಗ್ಗೆ ತಾನೇ ಭವಿಷ್ಯ ನುಡಿದಿದ್ದನು. ಅದರ ಬಗ್ಗೆ ಒಂದು ಗಜಲ್ ರಚಿಸಿದ್ದನು. ಈ ಕವನವು ಹೀಗೆ ಆರಂಭವಾಗುತ್ತದೆ:

**ನನ್ನ ಬಳಿಯಲ್ಲಿರುವ ನನ್ನ ದೊರೆಯಿವನು**
**ಅವನೆಂಥ ಜೊತೆಗಾರ, ನೀನೆಂತು ಅರಿವೆ?**
**ನನ್ನ ಹೊನ್ನಿನ ಮುಖವ ನೀ ನೋಡಬೇಡ,**
**ಕಬ್ಬಿಣದ ಕಾಲುಗಳು ನನ್ನದಾಗಿರಲು.**

ರೂಮಿಯು ೧೨೭೩, ಡಿಸೆಂಬರ್ ೧೭ರಂದು ಕೊನ್ಯಾ ನಗರದಲ್ಲಿ ದೈವಾಧೀನನಾದನು. ಅವನ ದೇಹವನ್ನು ಅವನ ತಂದೆಯ ಸಮಾಧಿಯ ಪಕ್ಕದಲ್ಲಿಯೇ ಹೂಳಲಾಯಿತು. ಅದರ ಮೇಲೆ ಬಹಳ ಸುಂದರವಾದ ಮಂದಿರವನ್ನು ನಿರ್ಮಿಸಲಾಗಿದೆ. ಆ ಸಮಾಧಿಯ ಮೇಲೆ ಹೀಗೆ ಬರೆದಿದೆ:

**ನಾವು ಗತಿಸಿಹೋದಾಗ ಅರಸದಿರು–**
**ನಮ್ಮ ಸಮಾಧಿಯ ಇಳೆಯ ಮೇಲೆ;**
**ಅರಸದನು ಜನರ ಹೃದಯದಲ್ಲಿ.**

ಅಲ್ಲಿನ ರಾಣಿಯಾದ ಗುರಚು ಹಟುನ್ ರೂಮಿಯ ಆಪ್ತ ಸ್ನೇಹಿತೆ ಮತ್ತು ಪೋಷಕಳಾಗಿದ್ದಳು. ಅವಳು ರೂಮಿಯ ಸಮಾಧಿಗಾಗಿ ಧನಸಹಾಯವನ್ನು ಮಾಡಿದಳು. ದೊಡ್ಡದಾದ ಮಸೀದಿ, ನರ್ತನ ಶಾಲೆ, ಸಂತ ನಿವಾಸ, ಶಾಲೆ ಮತ್ತು ಸಂತರ ಸಮಾಧಿಗಳು – ಇವೆಲ್ಲವನ್ನೂ ಅದು ಹೊಂದಿದೆ. ಈಗಲೂ ಮುಸ್ಲಿಂ ಮತ್ತು ಮುಸ್ಲಿಮೇತರ ದೇಶಗಳಿಂದ ಸಾವಿರಾರು ಭಕ್ತಜನರು ಇದನ್ನು ದರ್ಶಿಸಲು ಬರುತ್ತಾರೆ.

ರೂಮಿಯ ಮರಣದ ನಂತರ ಅವನ ಮಗನಾದ ಸುಲ್ತಾನ್ ವಹಾದ್ ಎನ್ನುವವನು ಸೂಫೀ ಮನೆತನದ ಮೆವ್‌ಲೆವಿ ಎಂಬ ಪಂಗಡವನ್ನು ಸ್ಥಾಪಿಸಿದನು. ಇದರ ಅನುಯಾಯಿಗಳನ್ನು 'ಕುಣಿಯುವ ದರ್ವೇಷಿಗಳು' ಎಂದೂ ಕರೆಯುತ್ತಾರೆ. ಅವರು ಮಾಡುವ ನೃತ್ಯ 'ಸೂಫೀ ನೃತ್ಯ' ಎಂದೂ ಪ್ರಸಿದ್ಧವಾಗಿದೆ. ಇಂಥ ನೃತ್ಯವನ್ನು ಸಾಮ ಎಂಬ ವಿಶೇಷ ಆಚರಣೆಯಲ್ಲಿ ಮಾಡುತ್ತಾರೆ.

ಒಟ್ಟಿನಲ್ಲಿ, ಜಲಾಲುದ್ದೀನ್ ರೂಮಿ ಇಸ್ಲಾಂ ಧರ್ಮದ ಒಬ್ಬ ದೊಡ್ಡ ತತ್ತ್ವಶಾಸ್ತ್ರಜ್ಞನಾಗಿದ್ದನು ಮತ್ತು ದಾರ್ಶನಿಕನಾಗಿದ್ದನು. ಅವನದು ಅಸೀಮ ಸಹಾನುಭೂತಿ, ಸಕಾರಾತ್ಮಕ ವೈಚಾರಿಕತೆ, ಸದ್ಗುಣ ಸಂಪನ್ನತೆ, ದಾನಬುದ್ಧಿ ಮತ್ತು ಪ್ರೇಮಪೂರ್ವಕ ಅರಿವು – ಇವುಗಳನ್ನು ಒಳಗೊಂಡಿರುವ ಉದಾತ್ತ ತತ್ತ್ವ. ಅವನ ಪ್ರಕಾರ ಎಲ್ಲ ಧರ್ಮಗಳೂ ಸಮಾನ ಸತ್ಯವನ್ನು ಪ್ರತಿಪಾದಿಸುತ್ತವೆ. ಹೀಗಾಗಿ ಅವನ ಬೋಧನೆಗಳು ಎಲ್ಲ ಜನಾಂಗ ಮತ್ತು ಧರ್ಮಕ್ಕೆ ಸೇರಿದ್ದು, ಎಲ್ಲರಿಗೂ ಆಪ್ಯಾಯಮಾನವಾಗುತ್ತವೆ. ❁

## ನಿನ್ನೆದೆಯ ದೀಪ...

ನಿನ್ನೆದೆಯಲೊಂದು ದೀಪವಿದೆ, ಹಚ್ಚಲನುವಾಗು
ನಿನ್ನೆದೆಯಲೊಂದು ಶೂನ್ಯವಿದೆ, ತುಂಬಲನುವಾಗು.
ಅನಿಸುತಿದೆಯಲ್ಲವೇ ನಿನಗೆ? ಪ್ರಿಯತಮನ ವಿರಹ
ನಿನ್ನೊಳಗೆ ತುಂಬಲಾಹ್ವಾನಿಸು, **ಅವನ;**
ಅಗ್ನಿಯನೆ ಆಲಿಂಗಿಸು.
ಬೇರೆ ನುಡಿವವರಿಗೆ ನೆನಪಿಸು ಇದನು –
'ಪ್ರೇಮ ಬಳಿ ಸಾರುವುದು ತಾನಾಗಿ,
ಅದರ ವ್ಯಾಕುಲತೆಯನು ಕಲಿಯಲಾರೆ,
ನೀನಾವ ಶಾಲೆಯಲ್ಲೂ.'

–ರೂಮಿ


***Statement about ownership and other particulars about Viveka Prabha (according to Form IV Rule 8, circulated by Registrar of Newspapers for India)***

| | | |
|---|---|---|
| 1. Place of Publication | : | **Mysore 570 020** |
| 2. Periodicity of Publication | : | **Monthly** |
| 3. Printer's Name | : | **Swami Atmajnananda** |
| Nationality | : | **Indian** |
| Address | : | **Adhyaksha, Sri Ramakrishna Ashrama, Yadavagiri, Mysore 570 020** |
| 4. Publisher's Name | : | **Swami Atmajnananda** |
| Nationality | : | **Indian** |
| Address | : | **Adhyaksha, Sri Ramakrishna Ashrama, Yadavagiri, Mysore 570 020** |
| 5. Editor's Name | : | **Swami Jnanayogananda** |
| Nationality | : | **Indian** |
| Address | : | **Sri Ramakrishna Ashrama Yadavagiri Mysore 570 020** |
| 6. Name & Addresses of the individuals who own the newspaper and partners or share-holders holding more than 1% of the capital | : | **Adhyaksha, Sri Ramakrishna Ashrama, Yadavagiri Mysore 570 020** |

**I, Swami Atmajnananda, hereby declare that the particulars given above are true to the best of my knowledge and belief.**

*sd.*
***Swami Atmajnananda***
01.03.2017 Signature of the publisher




ಜಪಾನಿನ ಕಥೆಗಳು

# ಮಮೋತಾರಾ

ಬಂಗಾಳಿ ಮೂಲ : **ರಾಜಕೃಷ್ಣ ಭಟ್ಟಾಚಾರ್ಯ** ಚಿತ್ರ : **ಜುಂಕೋ ಭಟ್ಟಾಚಾರ್ಯ** ಕನ್ನಡಾನುವಾದ : **ಗಿರಿಜಾದೇವಿ**



ಬಹಳ ಕಾಲದ ಹಿಂದೆ ಒಂದು ಸಣ್ಣ ನದಿಯ ದಡದಲ್ಲಿ, ಕಾಡಿನ ಸಮೀಪ ಒಂದು ಗುಡಿಸಲಿನಲ್ಲಿ ಮುದಿ ದಂಪತಿ ವಾಸವಾಗಿದ್ದರು. ಮುದುಕ ಹುಲ್ಲು ಕೊಯ್ದು ತರಲು ಕಾಡಿಗೆ ಹೋಗಿದ್ದ. ಮುದುಕಿ ಬಟ್ಟೆಗಳನ್ನು ಒಗೆದು ಶುಭ್ರಗೊಳಿಸಲು ನದಿಗೆ ಬಂದಳು. ಮುದುಕಿ ಬಟ್ಟೆಗಳನ್ನು ಒಗೆಯುತ್ತಿರುವಾಗ, ನದಿಯಲ್ಲಿ ಒಂದು ದೊಡ್ಡದಾದ ಸುಂದರ ಪೀಚ್‌ಹಣ್ಣು ತೇಲಿಕೊಂಡು ತನ್ನತ್ತಲೇ ಬರುತ್ತಿರುವುದನ್ನು ನೋಡಿದಳು. ಅಚ್ಚರಿಗೊಂಡ ಮುದುಕಿ ಅದನ್ನು ಎತ್ತಿಕೊಂಡು ಮನೆಗೆ ಬಂದಳು. ಮುದುಕ, ಮುದುಕಿ ಇಬ್ಬರೂ ಪೀಚ್ ಹಣ್ಣನ್ನು ಎರಡು ಭಾಗವಾಗಿ ಮಾಡುತ್ತಲೇ, ಅದರೊಳಗೆ ಒಂದು ಸಣ್ಣ ಗಂಡುಮಗು ಇರುವುದನ್ನು ನೋಡಿ ಆನಂದಿತರಾದರು. ಮಗುವನ್ನು '**ಮಮೋತಾರಾ**' (ಜಪಾನಿನಲ್ಲಿ 'ಮಮೋ' ಎಂದರೆ ಪೀಚ್‌ಹಣ್ಣು) ಎಂದು ಕರೆದರು. ಮಗು ಬೆಳೆದು ದೊಡ್ಡದಾಯಿತು. ಆ ಪ್ರಾಂತದಲ್ಲಿ ದೈತ್ಯರ ಹಾವಳಿಯ ವಿಷಯ ಮಮೋತಾರಾನಿಗೆ ತಿಳಿಯಿತು. ದೈತ್ಯರು ತುಂಬಾ ಕ್ರೂರಿಗಳೂ, ದುರಾಚಾರಿಗಳೂ ಆಗಿದ್ದರು. ಅವರ ಬಳಿ ಹೇರಳವಾದ ಧನಸಂಪತ್ತೂ ಇದ್ದಿತು. ಅವರೆಲ್ಲರೂ ಒಂದು ದ್ವೀಪದಲ್ಲಿ ಒಟ್ಟಿಗೆ ವಾಸಿಸುತ್ತಿದ್ದರು. ಮಮೋತಾರಾ ಈ ದೈತ್ಯರನ್ನು ಸದೆಬಡಿಯುವ ನಿರ್ಧಾರ ಮಾಡಿದ. ದೈತ್ಯರೊಂದಿಗೆ ಹೋರಾಡಲು ಅವನು ಹೊರಟಿರುವುದನ್ನು ತಿಳಿದ ಮುದುಕಿ, ಬಹು ರುಚಿಕರವಾದ ಕರಿದಾಂಗೋ (ಜಪಾನಿನ ಪ್ರಸಿದ್ಧ ಸಿಹಿತಿಂಡಿ) ತಯಾರಿಸಿಕೊಟ್ಟಳು. ಅವನು ಆ ತಿನಿಸನ್ನು ವಸ್ತ್ರದಲ್ಲಿ ಗಂಟು ಕಟ್ಟಿಕೊಂಡು ಪ್ರಯಾಣ ಪ್ರಾರಂಭಿಸಿದ. ದಾರಿಯಲ್ಲಿ ಒಂದು ನಾಯಿ ಎದುರಿಗೆ ಬಂತು. ಅದು ಮಮೋತಾರಾನನ್ನು ವಿಚಾರಿಸಿತು, ''ನಿನ್ನ ಬಟ್ಟೆ ಗಂಟಿನಲ್ಲಿ ಏನಿದೆ ?'' ಅವನು ಹೇಳಿದ, ''ಇವು ಜಪಾನಿನ ಪ್ರಸಿದ್ಧ ಕಿರಿದಾಂಗೋ.'' ಅವನ ಮಾತು ಕೇಳಿದ ನಾಯಿ ಹೇಳಿತು, ''ನನಗೆ ಒಂದು ಕಿರಿದಾಂಗೋ ಕೊಡುತ್ತೀಯಾ? ನೀನು ಕೊಡುವುದಾದರೆ ನಾನೂ ನಿನ್ನ ಜತೆಯಲ್ಲಿಯೇ ಬರುತ್ತೇನೆ.'' ಕಿರಿದಾಂಗೋ ತಿಂದ ನಾಯಿ ತನ್ನ ಮಾತಿನಂತೆ ಮಮೋತಾರಾನೊಂದಿಗೇ ನಡೆಯತೊಡಗಿತು. ಹೀಗೆಯೇ ಸ್ವಲ್ಪ ದೂರ ನಡೆಯುವಷ್ಟರಲ್ಲಿ ಒಂದು ಕೋತಿ ಎದುರಾಯಿತು. ಅದೂ ಸಹ ನಾಯಿಯಂತೆಯೇ ಮಮೋತಾರಾನನ್ನು ಕೇಳಿ, ಕಿರಿದಾಂಗೋ ಪಡೆದು ತಿಂದಿತು. ಅದರ ರುಚಿಗೆ ಕೋತಿ ಬಹಳವಾಗಿ ಆನಂದಿಸಿತು. ಅದು ಮಮೋತಾರಾ ಮತ್ತು ನಾಯಿಗೆ ಹೇಳಿತು, ''ನಾನೂ ಸಹ ನಿಮ್ಮೊಂದಿಗೇ ಬರುತ್ತೇನೆ.'' ನಾಯಿ ಮತ್ತು ಕೋತಿಯೊಂದಿಗೆ ಪ್ರಯಾಣ ಮುಂದುವರೆಸಿದ ಮಮೋತಾರಾಗೆ ಒಂದು ಕಿಜಿ ಪಕ್ಷಿ (ಜಪಾನಿನ ಒಂದು ಸುಂದರ ಪಕ್ಷಿ) ಎದುರಾಯಿತು. ಇದೂ ಸಹ ಕಿರಿದಾಂಗೋ ಕೇಳಿ ಪಡೆದು ತಿಂದು, ಸಂತೋಷದಿಂದ ನಾಯಿ ಮತ್ತು ಕೋತಿಯೊಂದಿಗೆ ಹಾರುತ್ತಾ, ಎಗರುತ್ತಾ ಮಮೋತಾರಾನನ್ನು ಅನುಸರಿಸಿತು. ಒಂದು ಸಣ್ಣನದಿಯನ್ನು ದಾಟಿದ ಮಮೋತಾರಾ, ನಾಯಿ, ಕೋತಿ ಮತ್ತು ಕಿಜಿ ಪಕ್ಷಿಯೊಂದಿಗೆ ದೈತ್ಯರ ದ್ವೀಪವನ್ನು ಪ್ರವೇಶಿಸಿದ. ಇವರು ಬರುತ್ತಿರುವುದನ್ನು ದೂರದಿಂದಲೇ ನೋಡಿದ ದೈತ್ಯರೂ ಸಹ ಇವರನ್ನು ಎದುರಿಸಲು ತಯಾರಾದರು. ದೈತ್ಯರೊಂದಿಗೆ ಕಾಳಗ ಪ್ರಾರಂಭವಾಯಿತು. ಕೋತಿ ದೈತ್ಯರ ಶರೀರಗಳನ್ನು ಪರಚಿ ಗಾಯಮಾಡಿತು. ನಾಯಿಯಾದರೋ ಅವರನ್ನು ಎಲ್ಲೆಂದರಲ್ಲಿ ಕಡಿಯತೊಡಗಿತು. ಕಿಜಿ ಪಕ್ಷಿ ಹಾರಾಡುತ್ತಾ, ಅವರೆಲ್ಲರ ಕಣ್ಣುಗಳನ್ನು ಕುಕ್ಕಿಹಾಕಿತು. ಇವುಗಳ ನೇತೃತ್ವವನ್ನು ವಹಿಸಿದ ಮಮೋತಾರಾ ಯಶಸ್ವಿಯಾಗಿ ದೈತ್ಯರೊಂದಿಗೆ ಹೋರಾಡಿದ. ಕೊನೆಗೆ ದೈತ್ಯರು ಸೋಲೊಪ್ಪಿಕೊಂಡು, ಮಮೋತಾರಾನ ಕ್ಷಮೆ ಕೇಳಿದರು. ತಾವು ಮತ್ತೆಂದೂ ಜನರನ್ನು ಹಿಂಸಿಸಿ ಅನಾಚಾರ ಮಾಡುವುದಿಲ್ಲವೆಂದು ಮಾತುಕೊಟ್ಟರು. ಜಯಶೀಲನಾದ ಮಮೋತಾರಾ ದೈತ್ಯರ ಸಮಸ್ತ ಗುಪ್ತಧನವನ್ನು ಹೊತ್ತುಕೊಂಡು, ನಾಯಿ, ಕೋತಿ ಮತ್ತು ಕಿಜಿ ಪಕ್ಷಿಯೊಂದಿಗೆ ಬಹಳ ಸಂತೋಷದಿಂದ ತನ್ನ ಹಳ್ಳಿಗೆ ಹಿಂದಿರುಗಿದ. ✿



## ಪುಸ್ತಕ ಪರಿಚಯ




*ಕೃತಿ :* **ವಿವೇಕ ವಿಹಾರ**
*ಲೇಖಕರು:* **ಡಾ. ಡಿ.ಕೆ.ರಾಜೇಂದ್ರ**
*ಪ್ರಕಾಶಕರು :* **ಕಣ್ವ ಪ್ರಕಾಶನ,**
'ಕಾಲ ಕನಸು', ನಂ.894,
1ನೇ ಮೇನ್, ನಿಸರ್ಗ ಬಡಾವಣೆ,
ಚಂದ್ರಾ ಲೇಔಟ್,
ಬೆಂಗಳೂರು, 560072
ಫೋನ್: 080-23206778
*ಪುಟಗಳು :* **144**
*ಬೆಲೆ* : **ರೂ. 105/-**

ಇತ್ತೀಚೆಗೆ ಸ್ವಾಮಿ ವಿವೇಕಾನಂದರ ಹೆಸರು ಭಾರತದಾದ್ಯಂತ ಹಳ್ಳಿ ಹಳ್ಳಿಗಳಲ್ಲೂ, ನಗರ ಪ್ರದೇಶಗಳಲ್ಲೂ ಜನಜನಿತವಾಗುತ್ತಿದೆ. ನಮ್ಮ ರಾಷ್ಟ್ರೀಯ ನಾಯಕನೆಂದೇ ಗುರುತಿಸಲ್ಪಟ್ಟಿರುವ ಸ್ವಾಮೀಜಿಯವರ ಸ್ಫೂರ್ತಿಯ ನುಡಿಗಳು ಭಾರತೀಯ ಯುವಕರ ಪಾಲಿಗಂತೂ ಅದಮ್ಯ ಉತ್ಸಾಹದ ಕಿಡಿಯಂತೆ ಕೆಲಸ ಮಾಡುತ್ತಿವೆ. ವಿವಿಧ ಸಂದರ್ಭಗಳಲ್ಲಿ ಸ್ವಾಮೀಜಿಯವರನ್ನು ಕುರಿತು **'ವಿವೇಕ ಪ್ರಭ'** ಹಾಗೂ **'ವಿವೇಕ ದೀಪ್ತಿ'** ಪತ್ರಿಕೆಗಳಲ್ಲಿ ಪ್ರಕಟವಾದ ಹಲವು ಲೇಖನಗಳನ್ನು ಒಂದು ಸಂಕಲನವಾಗಿಸಿ, 'ವಿವೇಕವಿಹಾರ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ, ಕನ್ನಡದ ಹಿರಿಯ ವಿದ್ವಾಂಸರೂ ಉತ್ತಮ ಲೇಖಕರೂ ಆದ ಡಾ. ಡಿ.ಕೆ. ರಾಜೇಂದ್ರ ಅವರು. ಸ್ವಾಮಿ ವಿವೇಕಾನಂದರ ಜೀವನ, ಸಂದೇಶ, ಅವರ ವ್ಯಕ್ತಿತ್ವದ ವಿವಿಧ ಮುಖಗಳು, ವಿವಿಧ ವಿಷಯಗಳನ್ನು ಕುರಿತಂತೆ ಸ್ವಾಮೀಜಿ ದೃಷ್ಟಿ - ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದ ಹದಿನೆಂಟು ಲೇಖನಗಳು ಇಲ್ಲಿವೆ. 'ವಿಶ್ವ ವಂದನೀಯ ವಿರಾಗಿ', 'ಶ್ರದ್ಧೆ- ಶಕ್ತಿಯ ಮೂಲ', 'ಆತ್ಮವಿಶ್ವಾಸದ ಬಗ್ಗೆ ಸ್ವಾಮಿ ವಿವೇಕಾನಂದರು', 'ಶ್ರದ್ಧೆಯನ್ನು ಕುರಿತು', 'ಕುವೆಂಪು ಕಂಡ ಸ್ವಾಮಿ ವಿವೇಕಾನಂದರು' ಮೊದಲಾದ ಲೇಖನಗಳ ಶೀರ್ಷಿಕೆಗಳೇ ಇಲ್ಲಿನ ವಿಷಯ-ವಿಸ್ತಾರವನ್ನು ವಿಶದಪಡಿಸುತ್ತವೆ. ಸ್ವಾಮಿ ವಿವೇಕಾನಂದರ ಜೀವನ, ಕೃತಿಗಳ ಆಳವಾದ ಅಧ್ಯಯನದ ಹಿನ್ನೆಲೆಯೊಂದಿಗೆ, ಆಧುನಿಕ ಸಮಾಜಕ್ಕೆ ಅವರ ಆದರ್ಶ, ಧ್ಯೇಯಗಳನ್ನು ಅಳವಡಿಸಿಕೊಳ್ಳಬೇಕಾದ ಅಗತ್ಯದ ಬಗ್ಗೆ ಲೇಖಕರಿಗಿರುವ ಕಾಳಜಿ, ಸಾಮಾಜಿಕ ಪ್ರಜ್ಞೆ, ಈ ಲೇಖನಗಳ ಉದ್ದಗಲಕ್ಕೂ ಕಂಡುಬರುತ್ತದೆ.

ಈ ಪುಸ್ತಕದ ಆರಂಭದಲ್ಲಿ ಮುನ್ನುಡಿ ಬರೆದಿರುವ ಪೂಜ್ಯ ಸ್ವಾಮಿ ಮುಕ್ತಿದಾನಂದಜಿ ಮಹಾರಾಜ್ ಅವರು ಹೇಳಿರುವ ಈ ಕೆಳಗಿನ ನುಡಿಗಳು ಗಮನಾರ್ಹ: ''ಈ ಪುಸ್ತಕವು ನಮ್ಮನ್ನು ಕರೆಯುವುದು ಹೊತ್ತು ಕಳೆಯಲು ಮಾಡಿರುವ ಮೋಜಿನ ವಿಹಾರಕ್ಕಲ್ಲ; ಮನಸ್ಸು-ಬುದ್ಧಿಗಳ ಕ್ಷಿತಿಜವನ್ನು ವಿಸ್ತರಿಸುವ ಜ್ಞಾನವಿಹಾರಕ್ಕೆ! ಸ್ವಾಮಿ ವಿವೇಕಾನಂದರ ವಿರಾಟ್ ವ್ಯಕ್ತಿತ್ವದ ಹತ್ತು ಹಲವು ಮುಖಗಳನ್ನು ನಮಗೆ ದರ್ಶನ ಮಾಡಿಸುತ್ತಾ, ನಮ್ಮ ದೈನಂದಿನ ಜೀವನದ ಮತ್ತು ನಮ್ಮ ವ್ಯಕ್ತಿತ್ವದ ವಿವಿಧ ಮಗ್ಗಲುಗಳ ಮೇಲೆ ಪರಿಣಾಮಕಾರಿಯಾದ ಬೆಳಕನ್ನು ಚೆಲ್ಲಿ ಎಚ್ಚರಿಸುತ್ತದೆ, ಈ ಕೃತಿ. ಸುಲಭವಾಗಿ ಓದಿಸಿಕೊಳ್ಳುತ್ತಾ ಏಕಕಾಲಕ್ಕೆ ನಮ್ಮನ್ನು ಭಾವಶುದ್ಧಿ ಮತ್ತು ಇಚ್ಛಾಶಕ್ತಿಯ ಸಮೃದ್ಧಿಯೆಡೆಗೆ ಒಯ್ಯುತ್ತದೆ.''

ಈ ಪುಸ್ತಕದಲ್ಲೊಂದು ವಿಶೇಷತೆಯನ್ನು ಗಮನಿಸಬಹುದು. ಇಲ್ಲಿನ ಹಲವು ವಸ್ತು, ವಿಷಯಗಳ ಮಧ್ಯೆ ಕೇವಲ ಸ್ವಾಮಿ ವಿವೇಕಾನಂದರ ಧ್ಯೇಯ-ಆದರ್ಶ ಹಾಗೂ ಚಿಂತನೆಗಳಿಗೆ ಮಾತ್ರ ಸೀಮಿತವಾಗದ, ಸಮಾಜ ಹಾಗೂ ಪ್ರಸ್ತುತ ಜಗತ್ತಿನ ವಿದ್ಯಮಾನಗಳಿಗೆ ಸಂಬಂಧಪಡುವ ಕೆಲವು ವಿಚಾರಗಳೂ ನಡುನಡುವೆ ಇಣುಕುತ್ತವೆ. ಇದಕ್ಕೆ ಒಳ್ಳೆಯ ಒಂದು ಉದಾಹರಣೆ, 'ಕಲಾಕ್ಷೇತ್ರದಲ್ಲಿನ ಮೌಲ್ಯಗಳು' ಎಂಬ ಲೇಖನ. ಸ್ವಾಮಿ ವಿವೇಕಾನಂದರ ಮಾತಿನ ಉದ್ಧರಣೆಯೊಂದಿಗೆ ಲೇಖನ ಆರಂಭವಾಗಿದೆ; ಆದರೆ ಮುಂದೆ ಕಲೆ, ಸಂಸ್ಕೃತಿ, ನೈತಿಕತೆ ಮೊದಲಾದ ವಿಷಯಗಳ ನಿರ್ವಚನ, ವಿಶ್ಲೇಷಣೆ ಮುಂದುವರಿದು, ಇಲ್ಲಿ ಚರ್ಚಿಸಲಾಗಿರುವ ವಿಷಯದ ಪರಿಧಿ ವಿಸ್ತರಿಸುತ್ತಾ, ಆರ್ನಾಲ್ಡ್, ಎಲಿಯೆಟ್ ಹಾಗೂ ಜಾನಪದ ಚಿಂತನೆಗಳತ್ತ ವ್ಯಾಪಿಸುತ್ತದೆ. ಒಟ್ಟು ಬದುಕಿನ ವಿವಿಧ ಆಯಾಮಗಳಿಗೆ ಒಂದು ಕೇಂದ್ರ ಬಿಂದುವಿರುವಂತೆ, ಇಲ್ಲಿನ ಹಲವು ಚಿಂತನೆಗಳ ಆಳದಲ್ಲಿ ಸ್ವಾಮೀಜಿ ವಿಚಾರಗಳು ಏಕಸೂತ್ರತೆಯನ್ನು ಸಾಧಿಸುವ ಕೊಂಡಿಯಾಗಿ ಕಾಣಿಸಿಕೊಂಡಿದೆ. ವ್ಯಕ್ತವಾಗಿ, ಪ್ರಮುಖವಾಗಿ ಸ್ವಾಮಿ ವಿವೇಕಾನಂದರನ್ನು ಕುರಿತು ಬರೆದ ಲೇಖನಗಳಲ್ಲೂ ಈ ಅಂಶವನ್ನು ಗುರುತಿಸಬಹುದು. ದೇಶ, ಕಾಲ, ಸಂದರ್ಭಗಳ ಪರಿಮಿತಿಯಲ್ಲಿ ವ್ಯಕ್ತಗೊಂಡ ಮಹಾಪುರುಷರೊಬ್ಬರ ವಿಚಾರಗಳು ಈ ಎಲ್ಲ ಮಿತಿಗಳನ್ನೂ ಮೀರಿ ಹೇಗೆ ಸಾರ್ವತ್ರಿಕ ಮೌಲ್ಯಗಳಾಗಿ ಪ್ರಸ್ತುತವಾಗುವವು ಎಂಬುದನ್ನು ಈ ಸಂಕಲನದ ಲೇಖನಗಳು ತೋರಿಸಿಕೊಟ್ಟಿವೆ.

ಸ್ವಾಮಿ ವಿವೇಕಾನಂದರ ಸಂದೇಶಗಳನ್ನು ವಿಭಿನ್ನ ದೃಷ್ಟಿಕೋನಗಳಿಂದ, ಪ್ರಸ್ತುತ ಸಂದರ್ಭಕ್ಕೆ ಅನ್ವಯವಾಗುವ ದೃಷ್ಟಿಯಿಂದ ಪರಿಶೋಧಿಸುವ ಅನ್ವೇಷಕನ ಮನೋಭಾವ ಇಲ್ಲಿನ ಬರಹಗಳಲ್ಲಿ ವ್ಯಕ್ತವಾಗಿವೆ. ಸರಳ ಶೈಲಿ ಹಾಗೂ ಗಂಭೀರ ಧಾಟಿಯ ಈ ಲೇಖನಗಳ ಸಂಕಲನವು ಸುಂದರ ವಿನ್ಯಾಸ, ಸುಲಭ ಬೆಲೆ ಹಾಗೂ ಸೀಮಿತ ಗಾತ್ರದಿಂದ ಕೂಡಿ ಆಕರ್ಷಕವೆನಿಸಿದೆ. ಸ್ವಾಮೀಜಿ ವಿಚಾರಧಾರೆಗಳಲ್ಲಿ ನಂಬಿಕೆಯಿರುವ ಪ್ರತಿಯೊಬ್ಬರೂ ಓದಲೇಬೇಕಾದ ಪುಸ್ತಕವಿದು. 



# ಸೋದರಿ ನಿವೇದಿತಾ ಭಾಗ ೬

ಕಥೆ: ದೇವಪ್ರಸಾದ ಭಟ್ಟಾಚಾರ್ಯ ಅನುವಾದ: ಉಷಾ ಎಸ್. ಮೂರ್ತಿ ಚಿತ್ರ: ಸುನಿತಾ ವಾಸು


















ನಿವೇದಿತಾ ತನ್ನ ಪಾಶ್ಚಾತ್ಯ ಉಡುಗೆಗಳನ್ನು ಬಿಟ್ಟು, ಒಂದು ಸಾಧಾರಣ ಬಿಳಿಯ ನಿಲುವಂಗಿಯನ್ನು ತೊಡುತ್ತಿದ್ದಳು ಮತ್ತು ಸೊಂಟಕ್ಕೆ ಒಂದು ಬಟ್ಟೆಯನ್ನು ಸುತ್ತಿಕೊಳ್ಳುತ್ತಿದ್ದಳು.



ಮತ್ತು ಜಪಮಾಲೆಯನ್ನು ಕೊರಳಲ್ಲಿ ಧರಿಸುತ್ತಿದ್ದಳು.



ನಿವೇದಿತಾ ಭಾರತದ ಒಬ್ಬ ನಾಯಕಿಯಾದಳು.



ಸೇವೆಗಾಗಿ ಜೀವನವನ್ನು ಮುಡಿಪಾಗಿಡುವ ಉದ್ದೇಶದಿಂದ ಇಂಗ್ಲೆಂಡಿನಲ್ಲಿನ ತನ್ನ ಉಜ್ವಲ ಭವಿಷ್ಯದ ಅವಕಾಶಗಳನ್ನು ತ್ಯಜಿಸಿದಳು.



ನಿವೇದಿತಾ ಭಾರತಕ್ಕೆ ಹಿಂದಿರುಗಿದ ಮೇಲೆ ಸ್ವಾಮೀಜಿಯ ಶಿಷ್ಯೆಯಾದ ಅಮೇರಿಕಾದ ಸಿಸ್ಟರ್ ಕ್ರಿಸ್ಟೈನ್ ಕೂಡ ಅವಳೊಂದಿಗೆ ಸೇರಿದಳು.



ಅವರಿಬ್ಬರೂ ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಮುಂದೆ ಈ ಮನೆ ಸಹೋದರಿಯರ ಮನೆ ಎಂದೇ ಹೆಸರಾಯಿತು. ಕೊನೆಯವರೆಗೂ ನಿವೇದಿತಾ ಈ ಮನೆಯಲ್ಲಿಯೇ ವಾಸಿಸುತ್ತಿದ್ದಳು.




ಅವಳು ಶಾಲೆಯನ್ನು ಪುನರಾರಂಭಿಸುವ ಮುನ್ನ ಸರಸ್ವತಿ ಪೂಜೆಯನ್ನು ಮಾಡಿದಳು.


ವಿದ್ಯಾಧಿದೇವತೆಯಾದ ಸರಸ್ವತಿಯನ್ನು ಆರಾಧಿಸಿದಳು.


ನಿನಗೆ ಎಲ್ಲವೂ ಸಿದ್ಧಿಸಲಿ ! ಜಗನ್ಮಾತೆ ನಿನ್ನ ಮನಸ್ಸು ಬುದ್ಧಿ ಹಾಗೂ ಕೈಗಳಲ್ಲಿ ನೆಲೆಸುವಂತಾಗಲಿ.


ನಿನಗೆ ಹೆಚ್ಚಿನ ಸಾಮರ್ಥ್ಯ ನೀಡುವಂತೆ ನಾನು ಜಗನ್ಮಾತೆಯನ್ನು ಪ್ರಾರ್ಥಿಸುತ್ತೇನೆ. ಅದರೊಂದಿಗೆ ಅಪಾರ ಶಾಂತಿಯೂ ನಿನ್ನದಾಗಲಿ.


ಸಿಸ್ಟರ್ ಕ್ರಿಸ್ಟೈನ್‌ಳ ಜೊತೆಗೂಡಿ ಮಹಿಳೆಯರ ವಿಭಾಗವೊಂದನ್ನು ಪ್ರಾರಂಭಿಸಿದಳು.


ಅವರಿಗೆ ಓದಲು ಬರೆಯಲು ಹೇಳಿಕೊಟ್ಟಳು. ಹೊಲಿಗೆಯಂತಹ ಕುಶಲಕಲೆಗಳಲ್ಲೂ ತರಬೇತಿ ನೀಡಿದಳು.


ನಿವೇದಿತಾ ತನ್ನ ಶಾಲೆಯನ್ನು ರಾಷ್ಟ್ರೀಯತೆಯ ತಳಹದಿಯಲ್ಲೇ
ಬೆಳೆಸಿದಳು.


ವಿದೇಶೀ ಸರ್ಕಾರದಿಂದ ಯಾವ ಸಹಾಯವನ್ನೂ
ಅವಳು ಸ್ವೀಕರಿಸಲಿಲ್ಲ.


ಹುಡುಗಿಯರು ಭಾರತೀಯ ಪದ್ಧತಿಯಂತೆ ಕೆಳಗೆ ಮಣೆ ಮತ್ತು
ಬರೆಯಲು ಸಣ್ಣ ಮಂಚವನ್ನು ಬಳಸುತ್ತಿದ್ದರು.


ನೀವು ಭಾರತದ ಹೆಣ್ಣುಮಕ್ಕಳು
ಎನ್ನುವುದನ್ನು ಮರೆಯಬೇಡಿ !


ಭಾರತೀಯತೆಯನ್ನು ಬಿಂಬಿಸುವ ವರ್ಣಚಿತ್ರಗಳನ್ನೇ ಬರೆಯಿರಿ.
ಮುಂದಿನ ಸಂಚಿಕೆಗೆ..







**ಸುದ್ದಿ ಸಂಚಯ**

## ಮೈಸೂರು ಶ್ರೀರಾಮಕೃಷ್ಣ ಆಶ್ರಮದ ನೇತೃತ್ವದಲ್ಲಿ ''ಸ್ವಚ್ಛ ಮೈಸೂರು ಸ್ವಸ್ಥ ಜೀವನ'' ಅಭಿಯಾನ

ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಹಮ್ಮಿಕೊಂಡಿರುವ ''ಸ್ವಚ್ಛ ಮೈಸೂರು ಸ್ವಸ್ಥ ಜೀವನ'' ಎಂಬ ಸ್ವಚ್ಛತಾ ಅಭಿಯಾನ ಮತ್ತು ಜನ ಜಾಗೃತಿ ಕಾರ್ಯಕ್ರಮದ ಉದ್ಘಾಟನೆಯು ೨೦೧೭ರ ಜನವರಿ ೨೯ರಂದು ಬೆಳಿಗ್ಗೆ ಮಂಜುನಾಥಪುರ ಆಂಜನೇಯಸ್ವಾಮಿ ದೇವ ಸ್ಥಾನದ ಮುಂಭಾಗದಲ್ಲಿ ನಡೆಯಿತು. ಆಶ್ರಮದ ಯತಿಗಳ ಶಾಂತಿ ಮಂತ್ರ ಪಠಣದೊಂದಿಗೆ ಪ್ರಾರಂಭವಾದ ಕಾರ್ಯಕ್ರಮದ ಉದ್ಘಾಟನೆಯನ್ನು ಮೈಸೂರು ಮಹಾನಗರಪಾಲಿಕೆಯ ಮಹಾಪೌರರಾದ ಶ್ರೀ ಎಂ. ಜೆ. ರವಿಕುಮಾರ್ ಅವರು ಸಸಿಗಳಿಗೆ ನೀರೆರೆಯುವ ಮೂಲಕ ನೆರವೇರಿಸಿಕೊಟ್ಟರು. ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿ ಮಹಾರಾಜ್‌ರವರು ಸ್ವಾಗತ ಮತ್ತು ಪ್ರಾಸ್ತಾವಿಕ ಭಾಷಣವನ್ನು ಮಾಡಿ, ಸ್ವಚ್ಛತೆ ಎಂಬುದು ವೈಯಕ್ತಿಕ ಜವಾಬ್ದಾರಿ ಎನ್ನುತ್ತಾ ಸ್ವಚ್ಛತಾ ಪ್ರತಿಜ್ಞೆಯನ್ನು ಮಾಡಿಸಿದರು. ಈ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿದ್ದ ಮಾಜಿ ವಿಧಾನಪರಿಷತ್ ಸದಸ್ಯರಾದ ಶ್ರೀ ಡಿ. ಮಾದೇಗೌಡರು, ವಿಶೇಷ ಆಹ್ವಾನಿತರಾಗಿ ಆಗಮಿಸಿದ ಮೈಸೂರು ಮಹಾನಗರಪಾಲಿಕೆಯ ಆಯುಕ್ತರಾದ ಶ್ರೀ ಜಿ. ಜಗದೀಶ್‌ರವರು ಭಾಗವಹಿಸಿ ಮಾತನಾಡಿ, ''ಸ್ವಚ್ಛ ಮೈಸೂರು ಸಂಪೂರ್ಣ ಸ್ವಚ್ಛ ಮೈಸೂರು ಎಂದಾಗಲು ನಾವೆಲ್ಲಾ ಜವಾಬ್ದಾರಿಯಿಂದ ಶ್ರಮಿಸಬೇಕು'' ಎಂದರು. ನಗರಸಭಾ ಸದಸ್ಯರಾದ ಶ್ರೀಮತಿ ಅನುಸೂಯ ಅವರು ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಿಧಾನಸಭಾ ಸದಸ್ಯರಾದ ಶ್ರೀ ವಾಸು ಅವರು ವಹಿಸಿದ್ದರು. ಆಶ್ರಮದ ಹಿರಿಯ ಯತಿಗಳಾದ ಪೂಜ್ಯ ಸ್ವಾಮಿ ನಿತ್ಯಸ್ಥಾನಂದಜಿ ಮಹಾರಾಜ್‌ರವರು ಆಶೀರ್ವಚನ ನೀಡುತ್ತಾ , ಮೂಲಕ ''ಮೈಸೂರು ಗಲೀಜು, ಗಲಾಟೆಗಳಿಗೆ ಅಪವಾದವಾದ ನಗರ'' ಎಂದರು. ಕಾರ್ಯಕ್ರಮದ ವಂದನಾರ್ಪಣೆಯನ್ನು ಪ್ರೊ. ಕೆ.ಎಸ್. ನಾಗಪತಿಯವರು ನೆರವೇರಿಸಿ ಕೊಟ್ಟರು.

ಸಮಾರಂಭದಲ್ಲಿ ವಿವಿಧ ಶಾಲೆಗಳ ವಿದ್ಯಾರ್ಥಿಗಳು, ಆಶ್ರಮದ ಸ್ವಯಂಸೇವಕರು, ಭಕ್ತರೂ ಸೇರಿದಂತೆ ಸುಮಾರು ೪೦೦ ಜನರು ಭಾಗವಹಿಸಿದ್ದರು. ಬಳಿಕ ಮಂಜುನಾಥಪುರದ ವಿವಿಧ ಏಳು ಬಡಾವಣೆಗಳಲ್ಲಿ ಸ್ವಚ್ಛತಾ ಕಾರ್ಯವನ್ನು ಕೈಗೊಳ್ಳಲಾಯಿತು. ಈ ಅಭಿಯಾನವು ಆಶ್ರಮದ ಮಾರ್ಗದರ್ಶನದಲ್ಲಿ ಸತತ ೪೦ ವಾರಗಳ ಕಾಲ, ನಗರದ ವಿವಿಧ ಬಡಾವಣೆಗಳಲ್ಲಿ ಮುಂದುವರಿಯಲಿದೆ.








## ಮೈಸೂರು ಆಶ್ರಮದಲ್ಲಿ 'ವಿವೇಕ ಶಿಕ್ಷಣ'ದ ೧೭ನೇ ವಾರ್ಷಿಕೋತ್ಸವ

ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಕಳೆದ ೧೭ ವರ್ಷಗಳಿಂದ ನಡೆಸುತ್ತಿರುವ **'ವಿವೇಕ ಶಿಕ್ಷಣ'** ಉಚಿತ ಶಿಕ್ಷಣ ತರಬೇತಿ ಕಾರ್ಯಕ್ರಮದ **ವಾರ್ಷಿಕೋತ್ಸವ ಸಮಾರಂಭ**ವನ್ನು ಜನವರಿ ೨೧, ಶನಿವಾರದಂದು ಆಶ್ರಮದ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ ಆಶ್ರಮದ ಅಧ್ಯಕ್ಷರಾದ ಪೂಜ್ಯ ಸ್ವಾಮಿ ಆತ್ಮಜ್ಞಾನಂದಜಿ, ಪೂಜ್ಯ ಸ್ವಾಮಿ ನಿತ್ಯಸ್ಥಾನಂದಜಿ ಹಾಗೂ ಶ್ರೀರಾಮಕೃಷ್ಣ ವಿದ್ಯಾಶಾಲೆಯ ಪ್ರಾಂಶುಪಾಲರಾದ ಶ್ರೀ ಎಸ್. ಬಾಲಾಜಿ ಪಾಲ್ಗೊಂಡಿದ್ದರು. ಅನಂತರ ವಿವೇಕ ಶಿಕ್ಷಣದ ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಆಯೋಜಿಸಲಾಗಿತ್ತು. ಭಕ್ತಿಗೀತೆ, ಜಾನಪದ ಗೀತೆ ಹಾಗೂ ದೇಶಭಕ್ತಿ ಗೀತೆಗಳ ಸಮೂಹ ನೃತ್ಯ ಇವುಗಳ ನಂತರ, **'ಕಿತ್ತೂರಿನ ವೀರಮಹಿಳೆ - ರಾಣಿ ಚೆನ್ನಮ್ಮ'** ಎಂಬ ನಾಟಕವನ್ನು ವಿದ್ಯಾರ್ಥಿಗಳು ಬಹಳ ಆಕರ್ಷಕವಾಗಿ ಪ್ರದರ್ಶಿಸಿದರು.

ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿರುವ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಈ ಶೈಕ್ಷಣಿಕ ತರಬೇತಿಯಿಂದ ಇಲ್ಲಿಯವರೆಗೆ ೫೦೦೦ಕ್ಕೂ ಹೆಚ್ಚು ವಿದ್ಯಾರ್ಥಿಗಳು ಪ್ರಯೋಜನ ಪಡೆದಿರುತ್ತಾರೆ. ವಿಶೇಷವಾಗಿ ಹಲವಾರು ಸರಕಾರಿ ಶಾಲೆಗಳಲ್ಲಿ ಕಲಿಯುತ್ತಿರುವ ಕನ್ನಡ ಮಾಧ್ಯಮದ ೯ ಹಾಗೂ ೧೦ನೆಯ ತರಗತಿಯ ವಿದ್ಯಾರ್ಥಿಗಳು ಈ ಕಾರ್ಯಕ್ರಮದ ಸದುಪಯೋಗ ಪಡೆದುಕೊಳ್ಳುತ್ತಿದ್ದಾರೆ.

Managing Editor : Swami Atmajnananda
Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

